# ಕನ್ನಡ ಕುಲದೀಪಕರು



ಟಿ. ಮಹಾಬಲೇಶ್ವರಭಟ್ಟ



ಪ್ರಕಾಶಕರು
**ಹೇಮಂತ ಸಾಹಿತ್ಯ**
ಅರಳೇಪೇಟೆ, ಭಾಷ್ಯಂ ರಸ್ತೆ
ಬೆಂಗಳೂರು—೫೬೦೦೫೩

'KANNADA KULADEEPAKARU' (Kannada)
Author Sri T. Mahabaleswar Bhat,
Published by Hemantha Sahithya
Cottonpet, Bhasyam Road, Bangalore-560053
printed at Durga Printers, Sagar,
Cover printed at Pragathi Mudrana, Shimoga
First Edition 1978. Page : 98+9=107
Price Rs. 8-00

033 wx

N18

ಪ್ರಥಮ ಮುದ್ರಣ
೧೨ ನವಂಬರ್ ೧೯೭೮



ಚಿತ್ರಗ್ರಾಹಕರು :- ಎಸ್. ಹನುಮಂತಜೋಯಿಸ್

ಬೆಲೆ ೮ ರೂ.




ಮುದ್ರಕರು :
ದುರ್ಗಾ ಪ್ರಿಂಟರ್ಸ್, ಸಾಗರ

ಹೊದಿಕೆ ಮುದ್ರಣ :
ಪ್ರಗತಿ ಮುದ್ರಣ, ಶಿವಮೊಗ್ಗ

ಪತ್ರಿಕೋದ್ಯಮದಲ್ಲಿ ಸಾಹಸಭೀಮರಾಗಿ
ಇಪ್ಪತ್ತು ವರ್ಷಗಳಿಂದ ಸ್ನೇಹವನ್ನು ಗಟ್ಟಿಯಾಗಿ ಉಳಿಸಿಕೊಂಡ
ಶ್ರೀ ಪಾಟೀಲ ಪುಟ್ಟಪ್ಪನವರಿಗೆ
ವಿಶ್ವಾಸ ಪೂರ್ವಕ

## ಶ್ರೀ ಟಿ. ಮಹಾಬಲೇಶ್ವರಭಟ್ಟರ ಕೃತಿಗಳು

೧ ಗುಲಾಬಿ (ಕಥಾಸಂಕಲನ)
೨ ಹೂಮಾಲೆ (ಕವನಸಂಕಲನ)
೩ ತೋರಣ (ಕಥಾಸಂಕಲನ)
೪ ಹೊಸೂರಿನ ಹಲವರು (ಕಾದಂಬರಿ)
೫ ಮೈಸೂರಿನ ಋಕ್ತಿನ ಮನುಷ್ಯ (ಜೀವನಪರಿಚಯ)
೬ ಸಾಹಿತ್ಯ ಶಿಲ್ಪಿಗಳು ಭಾಗ ೧
೭ ಸಾಹಿತ್ಯ ಶಿಲ್ಪಿಗಳು ಭಾಗ ೨
೮ ಋತುಗಾನ (ಕವನಸಂಕಲನ)
೯ ಅಣ್ಣ ತಂಗಿ (ಕಾದಂಬರಿ)
೧೦ ವ್ಯಾಘ್ರಮುಖ (ಕಾದಂಬರಿ) ಅಚ್ಚಿನಲ್ಲಿ
೧೧ ಮಾನವ ರಾಕ್ಷಸರು (ಕಾದಂಬರಿ) ,,
೧೨ ನನ್ನ ಬದುಕು ಮತ್ತು ಬರಹ ,,
೧೩ ಕನ್ನಡ ಕುಲದೀಪಕರು

# ಮುನ್ನುಡಿ

" ಕನ್ನಡ ಕುಲದೀಪಕರು " ಇದು ನನ್ನ ಹದಿಮೂರನೇ ಪುಸ್ತಕವಾಗಿ ಪ್ರಕಟವಾಗುತ್ತಿದೆ. ಈ ಹಿಂದೆ " ಸಾಹಿತ್ಯ ಶಿಲ್ಪಿಗಳು " ಭಾಗ ೧ ಮತ್ತು ಭಾಗ ೨ ರಲ್ಲಿ ಐವತ್ತು ಜನ ಸಾಹಿತಿಗಳ ಪರಿಚಯವನ್ನು ಬರೆದಿದ್ದೆ. ಈ ಬರವಣಿಗೆ ಬರೆದು ಹದಿನೈದು ವರ್ಷ ಸಂದಿದೆ. ೧೯೬೭ ರಲ್ಲಿ ಹುಬ್ಬಳ್ಳಿಯ "ಪ್ರಪಂಚ" ಪತ್ರಿಕೆಯಲ್ಲಿ " ಕನ್ನಡ ಕುಲದೀಪಕರು " ಎಂಬ ಹೆಸರಿನಿಂದಲೇ ಅನೇಕ ಲೇಖನಗಳು ಪ್ರಕಟವಾದವು. ಆದರಲ್ಲಿ ಬಂದ ಹಲವು ಲೇಖನಗಳು ಇಲ್ಲಿ ಬಂದಿವೆ. ತಮ್ಮ ಪತ್ರಿಕೆಯಲ್ಲಿ ನನ್ನ ಲೇಖನವನ್ನು ಪ್ರಕಟಿಸಿದ " ಪ್ರಪಂಚ " ಪತ್ರಿಕೆಯ ಸಂಪಾದಕರಾದ ಶ್ರೀ ಪಾಟೀಲ ಪುಟ್ಟಪ್ಪನವರಿಗೆ ಕೃತಜ್ಞನಾಗಿದ್ದೇನೆ.

ಇಂತಹ ಪುಸ್ತಕಗಳು ಕನ್ನಡ ಸಾಹಿತ್ಯದಲ್ಲಿ ಬಹಳ ವಿರಳ. ಹಿರಿಯರಾದ ಅ. ನ. ಕೃಷ್ಣರಾಯರು ಇಪ್ಪತ್ತು ವರ್ಷಗಳ ಹಿಂದೆ, " ಕನ್ನಡ ಕುಲರಸಿಕರು " ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಅದಾದನಂತರ ಶ್ರೀ ರಾಮಚಂದ್ರಶರ್ಮರು " ಪ್ರತಿಭಾ ಸಂದರ್ಶನ "ವನ್ನು ಶ್ರೀ ಹಂ. ವೆಂ. ಸೀತಾರಾಮಯ್ಯನವರು "ಪ್ರತಿಭಾನ್ವಿತರು" ಎಂಬ ಪುಸ್ತಕವನ್ನು ಬರೆದು, ಸಾಹಿತಿಗಳನ್ನು, ಕಲಾವಿದರನ್ನು, ಸಂಗೀತಗಾರರನ್ನು, ಶಿಲ್ಪಿಗಳನ್ನು, ಮಠಾಧಿಪತಿಗಳನ್ನು ಪರಿಚಯ ಮಾಡಿಕೊಟ್ಟರು.

ನನ್ನ ಈ ಪುಸ್ತಕದಲ್ಲಿ ಇಪ್ಪತ್ತೈದು ಜನರನ್ನು ಕುರಿತು ಬರೆದಿದ್ದೇನೆ. ಇವರೆಲ್ಲರನ್ನು ಕುರಿತು ಬರೆಯಬೇಕಾದದ್ದು ಬಹಳಷ್ಟಿದೆ. ಒಬ್ಬೊಬ್ಬರ ಬಗ್ಗೆಯೂ ನೂರು, ಇನ್ನೂರು ಪುಟಗಳಷ್ಟು ಬರೆಯಲು ಬೇಕಾಗುವಷ್ಟು ವಸ್ತು ಇರುವಾಗ ಕೇವಲ ನಾಲ್ಕೈದು ಪುಟದಲ್ಲಿ ಪರಿಚಯ ಮಾಡಿಕೊಡುವುದು ಬಹಳ ಕಷ್ಟದ ಕೆಲಸ ಆದ್ದರಿಂದ ನಾನು ಎಲ್ಲರ, ಸಮಗ್ರ ಪರಿಚಯಕ್ಕೆ ಹೋಗದೆ, ವ್ಯಕ್ತಿಯ ಚೆಲುವನ್ನು, ಸಾಹಿತ್ಯದ ಸೂಕ್ಷ್ಮ ಅರಿವನ್ನು ಇಲ್ಲಿ ಮಾಡಿಕೊಡಲು ಪ್ರಯತ್ನಿಸಿದ್ದೇನೆ.

ಈ ಪುಸ್ತಕವನ್ನು ಪ್ರಕಟಿಸಬೇಕೆಂದು ಮೂರು ನಾಲ್ಕು ವರ್ಷದಿಂದ ನನ್ನ ಮಿತ್ರರು ಆಗಾಗ ಒತ್ತಾಯಿಸುತ್ತಾ ಬಂದರು. ಈ ಹಿಂದೆ ಬರೆದ ನನ್ನ ಲೇಖನಗಳು ಸಾಗರದಿಂದ ಬೇದೂರಿಗೆ ಮನೆ ಬದಲಾಯಿಸುವಾಗ ಕೆಲವು ಲೇಖನಗಳು ಕಳೆದು ಹೋದವು, ದೊರಕಿದಷ್ಟು ಮಾತ್ರ ಇಲ್ಲಿ ಪ್ರಕಟವಾಗಿದೆ.

ಮಿತ್ರರಾದ ಬೆಂಗಳೂರಿನ ಹೇಮಂತ ಸಾಹಿತ್ಯದ ಶ್ರೀ ಎಂ. ವೆಂಕಟೇಶರವರು ತಮ್ಮ ಪ್ರಕಾಶನದ ಮೂಲಕ ಈ ಪುಸ್ತಕವನ್ನು ಹೊರತರುತ್ತಿದ್ದಾರೆ ಅವರಿಗೆ ನನ್ನ ವಂದನೆಗಳು.

ಸಕಾಲದಲ್ಲಿ ಮುದ್ರಿಸಿಕೊಟ್ಟ ದುರ್ಗಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಹೆಚ್. ಎಸ್. ಶಶಿಧರಶರ್ಮರವರಿಗೂ, ಹೊದಿಕೆ ಪುಟವನ್ನು ಮುದ್ರಿಸಿಕೊಟ್ಟ ಶಿವಮೊಗ್ಗೆಯ ಪ್ರಗತಿ ಮುದ್ರಣದ ಶ್ರೀ ಎಸ್. ನಾರಾಯಣರಾಯರಿಗೂ ನಾನು ಕೃತಜ್ಞ.

"ಗುರುಕೃಪಾ"
ಬೇದೂರು.
೧೨-೧೧-೭೮

ಟಿ. ಮಹಾಬಲೇಶ್ವರಭಟ್ಟ.

ಕಳೆದ ಮೂವತ್ತು ವರ್ಷಗಳಿಂದ ಕನ್ನಡ ಸಾಹಿತ್ಯ ಹಾಗೂ ಸಾರ್ವಜನಿಕ ಸೇವೆಯನ್ನ ಅವಿರತವಾಗಿ ಮಾಡುತ್ತಾ' ಬಂನು, ಸಾರ್ವಜನಿಕ ಕ್ಷೇತ್ರದಲ್ಲೂ ಸಾಹಿತ್ಯ ಕ್ಷೇತ್ರದಲ್ಲೂ ದೊಡ್ಡ ಹೆಸರಿರುವ ಶ್ರೀ ಟಿ. ಮಹಾಬಲೇಶ್ವರಭಟ್ಟ ಅವರಿಗೆ ೫೦ ವರ್ಷ ತುಂಬಿದ ಈ ಸಂದರ್ಭದಲ್ಲಿ ನಮ್ಮ ಪ್ರಕಾಶನದ ಮೂಲಕ, ಅವರ "ಕನ್ನಡ ಕುಲದೀಪಕರು" ಪುಸ್ತಕವನ್ನ ಹೊರತರುವುದಕ್ಕೂ, ಅವರ ಹುಟ್ಟು ಹಬ್ಬದ ಸಾಗರದ ಸನ್ಮಾನ ಸಮಾರಂಭದಲ್ಲಿ ಇದನ್ನ ಬಿಡುಗಡೆ ಮಾಡಿ, ಸಮರ್ಪಿಸುವುದಕ್ಕೂ ನಮಗೆ ಅತ್ಯಂತ ಸಂತೋಷ ಉಂಟಾಗಿದೆ. ಇದಕ್ಕಾಗಿ ಶ್ರೀ ಟಿ. ಮಹಾಬಲೇಶ್ವರಭಟ್ಟರನ್ನ ನಾವು ಮನಸಾರೆ ಅಭಿನಂದಿಸುತ್ತೇ.ವೆ

ಎಂ. ವೆಂಕಟೇಶ್
ಹೇಮಂತ ಸಾಹಿತ್ಯ

ಬೆಂಗಳೂರು
೧೨–೧೧–೭೮

# ಕರ್ಣಾಟಕದ ಕಥೆ—

ಸಾಗರದ ಟಿ. ಮಹಾಬಲೇಶ್ವರಭಟ್ಟರು, ಸುಸಂಸ್ಕೃತ ಹವ್ಯಾಸ ಉಳ್ಳ ಸಂಘ ಜೀವಿಗಳು, ಸಾಹಿತಿಗಳ ಸ್ನೇಹಿತರು, ಸಾರ್ವಜನಿಕ ಜೀವನ ಸುಂದರವಾಗ ಬೇಕೆನ್ನುವ ಹಂಬಲುಳ್ಳವರು. ಒಳ್ಳೆಯದು ನೂರು ಮೈಲಿನ ಮೇಲಿದ್ದರೂ ಅದು ತಮ್ಮದೇ ಎನ್ನುವಂತೆ ಮುಂದೆ ಹೋಗಿ ಸ್ವಾಗತಿಸತಕ್ಕವರು. ಸಾರ್ವಜನಿಕ ಜೀವನ ಇಂತಹ ಹುಚ್ಚು ಹಚ್ಚಿಕೊಂಡ ಜನರಿಂದಲೇ ಒಳ್ಳೆಯ ಕಾರ್ಯಗಳಿಗೆ ಚಾಲನೆ ದೊರೆಯುತ್ತದೆ.

ಮಹಾಬಲೇಶ್ವರಭಟ್ಟರು, ಕನ್ನಡ, ಕಾವ್ಯ, ಕರ್ಣಾಟಕ, ಎಂದು ಅವುಗಳ ಉತ್ಕರ್ಷಕ್ಕಾಗಿ ಸಾಗರ ಪ್ರಾಂತ್ಯದಲ್ಲೆಲ್ಲಾ ಒಳ್ಳೆಯ ವಾತಾವರಣವನ್ನು ನಿರ್ಮಿಸಿ ದ್ದಾರೆ. ತಮ್ಮ ಸದಭಿರುಚಿಯನ್ನು ಸುತ್ತಲೆಲ್ಲ ಹಬ್ಬಿಸಿ ಸಾಹಿತಿಗಳಿಗೆಲ್ಲ ಅವರು ಸಾಗರ ನಗರವನ್ನು ತಾಯಿಮನೆ ಎನಿಸುವಂತೆ ಮಾಡಿದ್ದಾರೆ.

೨೬-೧೦-೧೯೬೯ "ಪ್ರಪಂಚ" ಹುಬ್ಬಳ್ಳಿ

ಸಾಗರದ ಸಾಹಿತಿ, ರಾಜಕಾರಿಣಿ ಶ್ರೀ ಟಿ. ಮಹಾಬಲೇಶ್ವರಭಟ್ಟರ ಹೆಸರು ನಾಡಿನ ಜನತೆಯ ಕಿವಿಯಮೇಲೆ ಇಪ್ಪತ್ತೈದು ವರ್ಷಗಳಿಂದಲೂ ಇದ್ದೇ ಇದೆ. ಅಷ್ಟಾಗಿಯೂ ಅವರಿಗೆ ಇದೀಗ ನಲವತ್ತೈದು ಆಗಿದೆ ನೋಡುವುದಕ್ಕೆ ಇಪ್ಪತ್ತೈದು ಮೂವತ್ತು ಆದವರಂತೆ ಕಾಣುತ್ತಾರೆ. ಅವರಿಗೆ ಪರಿಚಯವಿರದ ಸಾಹಿತಿ, ರಾಜಕಾರಿಣಿ, ಶಾಸಕ ಸಂಸತ್ ಸದಸ್ಯ ಇಲ್ಲವೆಂದರೆ ಅತಿಶಯೋಕ್ತಿ ಅಲ್ಲ. ಸ್ನೇಹಿತರನ್ನು ಮಾಡಿಕೊಳ್ಳುವ ಮಹಾಬಲೇಶ್ವರಭಟ್ಟರು ಇಪ್ಪತ್ತೆಂಟು ವರ್ಷ ಸಾಗರದಲ್ಲಿಯೇ ಇದ್ದವರು ಈಗ ವ್ಯವಸಾಯಕ್ಕೋಸುಗ ಸಾಗರಕ್ಕೆ ಐದು ಮೈಲಿ ದೂರದಲ್ಲಿರುವ ಬೇದೂರು ಗ್ರಾಮ ದಲ್ಲಿದ್ದಾರೆ.

ಬರೆಯಬಲ್ಲ ಅವರು ಇನ್ನು ಮುಂದೆ ಅಲ್ಲಿ ಹೆಚ್ಚು ಬರೆಯಬಹುದು. ಆದರೆ ನಾಲ್ಕು ವರ್ಷಗಳಿಂದಲೂ ಸಾಗರ ತಾಲ್ಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಕೆಲಸ ಮಾಡಿರುವ ಅವರನ್ನು ರಾಜಕಾರಣ ಬಿಟ್ಟೀತೆ? ಅವರು ತಮ್ಮ ತಾಲ್ಲೂಕಿನ ಜನರಿಗೆ ಒಬ್ಬ ಶಾಸಕನಿಗಿಂತಲೂ ಹೆಚ್ಚು ಕೆಲಸ ಮಾಡಿಕೊಟ್ಟಿದ್ದಾರೆ. ಭಟ್ಟರಲ್ಲಿ ಎಲ್ಲರನ್ನು ಸಂಗಡ ಕರೆದುಕೊಂಡು ಹೋಗುವ, ಹಿಡಿದುದನ್ನು ಬಿಡದೆ ಸಾಧಿಸುವ ಸಾಮರ್ಥ್ಯ ಇದೆ.

೨೩-೬-೭೪ "ಪ್ರಪಂಚ" ಹುಬ್ಬಳ್ಳಿ

# ಪರಿವಿಡಿ



# ಡಾ॥ ಶಿವರಾಮ ಕಾರಂತ

ಕಳೆದ ಇಪ್ಪತ್ತಮೂರು ವರ್ಷಗಳ ಹಿಂದೆ ೧೯೫೫ ಮೈಸೂರಿನಲ್ಲಿ ೩೭ ನೇ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಇದನ್ನು ನಡೆಸಿದವರು ಮೈಸೂರು ವಿಶ್ವವಿದ್ಯಾನಿಲಯದವರು, ಅಂದಿನ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಶ್ರೀ ವಿ. ಎಲ್. ಡಿಸೋಜರವರಿಂದ ಸ್ವಾಗತ. ಅತ್ಯಂತ ವೈಭವಪೂರಿತ ಸಮಾರಂಭ. ಅಂದಿನ ಸಮ್ಮೇಳನದ ಅಧ್ಯಕ್ಷರಾಗಿ ಡಾ॥ ಶಿವರಾಮಕಾರಂತರು ಈರೀತಿ ಹೇಳಿದರು. ನೀವು ಇಂದು ಒಂದು ಭಾಷೆಯನ್ನಾಡುವ ಜನರು. ಅಲ್ಲಿನ ಬರಹಗಾರನೊಬ್ಬನಿಗೆ ಎಷ್ಟೊಂದು ಹೆಚ್ಚಿನ ಗೌರವವನ್ನು ಕೊಡಬಹುದೋ, ಈ ಅಧ್ಯಕ್ಷ ಸ್ಥಾನದ ಆಯ್ಕೆ ಮೂಲಕ ಅಷ್ಟನ್ನು ನನಗೆ ಸಲ್ಲಿಸಿದ್ದೀರಿ ಎಂದು ಹೇಳಿದಮಾತು ಇಂದಿಗೂ ಕೂಡ ಕಿವಿಯಲ್ಲಿ ಹಾಗೆಯೇ ಉಳಿದಿದೆ. ಈಗ ಅದೇ ಕಾರಂತರಿಗೆ ರಾಷ್ಟ್ರದ ಒಂದು ಮಹಾನ್ ಸಂಸ್ಥೆ ರಾಷ್ಟ್ರದ ಅತ್ಯುನ್ನತ ಗೌರವ, ಜ್ಞಾನಪೀಠ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು. ಅಂದು ಕನ್ನಡದ ಜನ ರಾಜ್ಯದ ಅತ್ಯುನ್ನತ ಗೌರವವನ್ನು ಕೊಟ್ಟರು, ಇಂದು ರಾಷ್ಟ್ರದ ಜನ ರಾಷ್ಟ್ರದ ಅತ್ಯುನ್ನತ ಗೌರವವನ್ನು ಕೊಟ್ಟರು. ಮನುಷ್ಯನಿಗೆ ಇದಕ್ಕಿಂತ ತೃಪ್ತಿ ಇನ್ನೇನುಬೇಕು ? ಅದಕ್ಕಾಗಿ ಕಾರಂತರು ಅಭಿನಂದನೀಯರು.

ಶ್ರೀ ಕಾರಂತರನ್ನು ಈಗಾಗಲೇ ನಾಡಿನ ಉದ್ದಗಲಕ್ಕೂ ಕರೆಸಿ ಗೌರವಿಸಲಾಗುತ್ತಿದೆ. ಕಾರಂತರ ಜೀವನ ಸದಾ ಗೌರವಾನ್ವಿತವಾದುದು. ಕನ್ನಡ ಸಾಹಿತ್ಯಕ್ಕೆ ಅರ್ಥಪೂರ್ಣವಾದ ಸ್ಥಾನವನ್ನು ಕೊಟ್ಟವರು ಕಾರಂತರು. ಇಂದು ಅವರು ಎಪ್ಪತ್ತಾರನೇ ವಯಸ್ಸಿನಲ್ಲಿ ಅವಿರತ ಸಾಹಿತ್ಯ ಸೇವೆಯನ್ನು ಮಾಡುತ್ತಿದ್ದಾರೆ. ಕಾರಂತ ಎಂಬ ಹೆಸರು ನಮ್ಮ ದೇಶದಲ್ಲಿ ಮಾತ್ರವಲ್ಲ ಪಾಶ್ಚಾತ್ಯ ದೇಶಗಳಲ್ಲೂ ಚಿರಪರಿಚಿತ. ಈಗ ಕಾರಂತರಿಗೆ ಎಪ್ಪತ್ತಾರು ವರ್ಷ ಆದರೂ ಚಿರ ಯುವಕ.

ಒಬ್ಬ ವ್ಯಕ್ತಿ ಎಪ್ಪತ್ತಾರು ವರ್ಷಗಳನ್ನು ಕಳೆಯುವುದು ಬಹಳ ಸುಲಭ. ಶಕ್ತಿ ಇದ್ದರೆ ನೂರಿಪ್ಪತ್ತು ವರ್ಷಗಳನ್ನು ಬೇಕಿದ್ದರೂ ಕಳೆಯಬಹುದು. ಆದರೆ ಕಳೆದ ವರ್ಷಗಳು ಸಾರ್ಥಕವಾದ ಜೀವನವಾಗಬೇಕು. ಅದು ಇನ್ನೊಬ್ಬರಿಗೆ ಆದರ್ಶವಾಗಿರಬೇಕು. ಪಟ್ಟ ಶ್ರಮ, ನೊಂದ ಜೀವ ಇನ್ನೊಬ್ಬರ ಬಾಯಿಯಿಂದ ಅಂತಃಕರಣದ ಮಾತುಗಳನ್ನು ಆಡಿಸುವಂತಾಗಬೇಕು. ಇದನ್ನು ಕಾರಂತರು ಸಾಧಿಸಿ ಎಪ್ಪತ್ತಾರು ವರ್ಷದ ಮೈಲಿಯ ಮೈಲುಗಲ್ಲಾಗಿ ನಿಂತಿದ್ದಾರೆ. ಎಪ್ಪತ್ತಾರು ವರ್ಷ ಕಳೆದವರು ನಮ್ಮಲ್ಲಿ ಬಹುಜನರಿದ್ದಾರೆ. ಇದಕ್ಕಾಗಿ ಕಷ್ಟಪಡಬೇಕಾಗಿಲ್ಲ. ಯಾವ ಒಂದು ಸಾಹಸವನ್ನೂ ಮಾಡಬೇಕಾಗಿಲ್ಲ. ಕಣ್ಣು ಮುಚ್ಚಿ ಕುಳಿತುಕೊಳ್ಳಬೇಕಾಗಿಯೂ ಇಲ್ಲ. ಅದು ವರ್ಷವರ್ಷವೂ ಬೆಳೆಯುತ್ತದೆ. ಕಳೆದ ಎಪ್ಪತ್ತಾರು ವರ್ಷಗಳ ಪಯಣದ ಮಜಲು ಹೇಗೆ ಸಾಗಿದೆ? ಎಂತಹ ಕಷ್ಟಕರ ಸಂದಿಗ್ಧ ಪರಿಸ್ಥಿತಿಯಲ್ಲೂ ಸಾಧನೆಯ ಸಿದ್ಧಿಯಕಡೆ ಸಾಗಿದರೆ ಮನುಷ್ಯನಾಗಿ ಬಾಳಲು ಸಾಧ್ಯವೆಂಬುದನ್ನು ನಮಗಿಂದು ಕಾರಂತರು ತೋರಿಸಿಕೊಟ್ಟಿದ್ದಾರೆ.

ಕಚ್ಚೆ ಪಂಚೆಯ ನೀಳಕೂದಲಿನ ಆಜಾನುಬಾಹು ವ್ಯಕ್ತಿ, ಮುಖದಲ್ಲಿ ವಿಷಾದ, ಕಣ್ಣಿನಲ್ಲಿ ತೀವ್ರತೆ, ಯಾವಾಗಲೂ ಯೋಚಿಸಿ ಆಗೊಂದು ಈಗೊಂದು ಮಾತನಾಡಿ ಜನರ ಮನಸ್ಸಿನಲ್ಲಿ, ಸುಪ್ತತೆಯಲ್ಲಿರುವ ವಿಚಾರಗಳನ್ನು ಕೆಣಕಿ ಹೊಡೆದೆಬ್ಬಿಸುವ ಅವರ ವಿನೂತನ ಶಕ್ತಿ, ಇವರನ್ನು ಕಂಡಾಗ ಈ ವ್ಯಕ್ತಿ ಸಾಧಾರಣ ವ್ಯಕ್ತಿಯಲ್ಲ ಇವರೊಬ್ಬ ನಟರೋ, ಸಾಹಿತಿಯೋ, ಚಿತ್ರಗಾರರೋ ಅಥವಾ ಇವೆಲ್ಲಕ್ಕೂ ಮಿಗಿಲಾದ ವಿಚಾರವಂತರೋ ಎಂಬುದು ವ್ಯಕ್ತವಾಗುತ್ತದೆ. ವ್ಯಕ್ತಿಯನ್ನು ಹತ್ತಿರದಿಂದ ತಿಳಿದುಕೊಂಡಾಗ ಇವೆಲ್ಲವೂ ಹೌದು ಎನ್ನಿಸುತ್ತದೆ. ಬಾಲಪ್ರಪಂಚದ ಬ್ರಹ್ಮರಾದ ಕಾರಂತರು "ಒಡಹುಟ್ಟಿದವರೊಡನೆ" ಒಡನಾಡಿದ್ದಾರೆ. ಬೆಟ್ಟದ ಜೀವನವನ್ನು ಏರಿದ್ದಾರೆ. ಹಸಿವನ್ನು ಕಂಡಿದ್ದಾರೆ. ಸ್ವಪ್ನದ ಹೊಳೆಯಲ್ಲಿ ಈಜಿದ್ದಾರೆ. ಈಜಿ ಕಾಲು ನೋವಾದಾಗ ಬೇರೆ ಮಾರ್ಗವಿಲ್ಲದೆ ಇನ್ನೊಂದೇ ದಾರಿ ಎಂದು ದಡ ಸೇರಿದ್ದಾರೆ. ಒಮ್ಮೆ ಸಮೀಕ್ಷೆ ನಡೆಸಿ ಅಶ್ವತ್ಥದ ನೆರಳಿನಲ್ಲಿ ಮಲಗಿ ಚಿಗುರಿದ ಕನಸ್ಸಿ

ನಲ್ಲಿಯೇ, ಮೂಕಜ್ಜಿಯ ಕನಸ್ಸನ್ನು ಕಂಡರು. ಮರಳಿ ಮಣ್ಣಿಗೆ ಹೋಗುವ ಮುನ್ನ ಈ ಜಗತ್ತಿನ ಸೃಷ್ಟಿಕರ್ತರಾಗಿ ಜನಜೀವನ ನೋಡಿದ್ದಾರೆ. ಕಾರಂತರ ಯಾವ ಅನುಭವವೂ ವ್ಯರ್ಥವಾಗಲಿಲ್ಲ. ಅವರ ಬದುಕು ದಿನದಿನಕ್ಕೂ ಆಳವೂ ವಿಸ್ತಾರವೂ ಆಗುತ್ತಾ ಬಂದಿತು. ಒಂದು ಸಂಸ್ಥೆ ಒಂದು ಸರ್ಕಾರ ಮಾಡಲಾರದ ಕೆಲಸವನ್ನು ಕಾರಂತರೊಬ್ಬರೇ ಮಾಡಿ ತೋರಿಸಿದ್ದಾರೆ. ನಾಟಕಕಾರರಾಗಿ, ಕಾದಂಬರಿಕಾರರಾಗಿ, ಸಂಗೀತಗಾರರಾಗಿ, ಚಿತ್ರಗಾರರಾಗಿ, ನೃತ್ಯಗಾರರಾಗಿ, ಅಭಿನಯಕಾರರಾಗಿ, ಹತ್ತು ಅವತಾರವನ್ನು ಎತ್ತಿ ದೇಶದ ಜನತೆಯ ಮುಂದೆ ಹುಚ್ಚು ಮನಸ್ಸಿನ ಹತ್ತು ಮುಖಗಳ ಮೂಲಕ ಕಾರಂತರು ಶ್ರೀಮಂತ ವ್ಯಕ್ತಿಯಾಗಿ ಕಂಡಿದ್ದಾರೆ.

ದೇಶದ ನಾಲ್ಕೂ ದಿಕ್ಕಿನಲ್ಲಿ ಪ್ರವಾಸ ಮಾಡಿ, ಅಪೂರ್ವ ಪಶ್ಚಿಮದ ಮೂಲಕ ಅಪಾರ ಅನುಭವವನ್ನು ಪಡೆದು, ಆಕಾಶದಲ್ಲಿ ಮಿಂಚು ಕಲೆಯ ದರ್ಶನ ಪಡೆದು ಯಕ್ಷಗಾನ ಬಯಲಾಟಕ್ಕೆ ಕಾಲಿಟ್ಟು ದೇಶವಿದೇಶಗಳ ಕಲಾ ರಸಿಕರಲ್ಲಿ ಸದಾ ಚಿರಂತನ ವ್ಯಕ್ತಿಯಾಗಿ ಕಲಾ ತಪಸ್ವಿಯಾಗಿದ್ದಾರೆ. ಹರೆಯದಲ್ಲೇ ಮುಪ್ಪಿನ ಅನುಭವವನ್ನು, ಮುಪ್ಪಿನಲ್ಲಿ ಹರೆಯದ ಹುರುಪನ್ನು ಉಳಿಸಿಕೊಂಡಿದ್ದಾರೆ. ಇಂದಿನ ಮತ್ತು ಹಿಂದಿನಕಾಲದ ಅನಂತ ಇತಿಹಾಸವನ್ನು ತಿರುವಿ ಹಾಕಿದರೆ ಅಲ್ಲೊಬ್ಬ ಇಲ್ಲೊಬ್ಬ ವ್ಯಕ್ತಿ ಕಾಣುವುದುಂಟು. ಅಂತಹ ವ್ಯಕ್ತಿತ್ವವನ್ನು ಕನ್ನಡ ಸಾಹಿತ್ಯ ಸಂಪುಟದಲ್ಲಿ ನಕ್ಷತ್ರದಂತೆ ಮಿನುಗುತ್ತಿರುವವರು ಕಾರಂತರು.

ಕಾರಂತರು ಒಮ್ಮೆ ಏಕೆ ಹಲವು ಬಾರಿ ನಿಷ್ಠುರವಾದಿಯಾಗಿ ಇರುವುದೂ ಉಂಟು. ಅದಕ್ಕೆ ಕಾರಂತರು ಹೇಳುವ ಮಾತು ಇದು. ನನ್ನ ಸಿಟ್ಟಿಗೆ, ನನ್ನ ದುಃಖ, ನನ್ನ ಬೇನೆ, ಹಸಿವು, ತೃಷೆ ಕಾರಣ. ಅದಕ್ಕೆ ನನ್ನ ಮತ್ತು ನನ್ನವರ ಮೇಲಿನ ಅನುತಾಪವೇ ಕಾರಣ. ಬಾಳು ಇನ್ನಷ್ಟು ಸುಂದರವಾಗಬಾರದೇ ? ಹಸನಾಗಬಾರದೇ? ಎಂದು ನನ್ನ ಮನ ಸದಾ ಯೋಚಿಸುತ್ತಿದೆ ಎಂದು ಹೇಳುತ್ತಾರೆ ಕಾರಂತರು. ಈ ಒಂದು ಮಾತಿನ ಅರ್ಥ ಮಾನವ ಜೀವನದಲ್ಲಿ ಅನಂತವಾಗಿದೆ ಎಂದು ಮಾತ್ರ ಹೇಳಬಹುದು. ನನ್ನ ಮದುವೆಗಾಗಿ, ನನ್ನ ಹೊಟ್ಟೆಗಾಗಿ ನೀವೆಂದೂ ಯೋಚಿಸಬೇಡಿ ಎಂದು ತನ್ನ ಮನೆಯ ಹಿರಿಯರಿಗೆ ಕಾರಂತರು ಒಮ್ಮೆ ಹೇಳಿದ್ದು ಉಂಟು. ಆ ಮಾತು ಇಂದು ಸತ್ಯವಾಗಿದೆ, ಅನ್ನಕ್ಕಾಗಿ, ಬಟ್ಟೆಗಾಗಿ ಈ ತನಕ ಯಾರನ್ನೂ ನಿರೀಕ್ಷಿಸಿದ್ದಿಲ್ಲ. ಇಂದು ಕನ್ನಡ ನಾಡಿನಲ್ಲಿ ಬರೆದು ಬರಹದ ಮೂಲಕ ತಾನೂ ಬದುಕಿ ತನ್ನ ಸಂಸಾರವನ್ನೂ ಬದುಕಿಸುವ ಹೊಣೆ ಹೊತ್ತವರು ಎಷ್ಟು ಮಂದಿ ಇದ್ದಾರೆ? ಹಾಗೆಯೇ ಕಾರಂತ ಜೀವನ ಎಪ್ಪತ್ತಾರು ವರ್ಷಗಳು ಸಂದಿವೆ.

ತನ್ನದೇ ಆದ ಮನೆ, ತನ್ನದೇ ಆದ ಸಂಸಾರ, ತನ್ನದೇ ಆದ ಬರವಣಿಗೆ, ತನ್ನದೇ ಆದ ಮುದ್ರಣಾಲಯದ ಮೂಲಕ, ಬರೆದು ಅಚ್ಚು ಹಾಕಿಸಿ ಪ್ರಕಾಶಿಸಿ ಮಾರು ಕಟ್ಟೆಗೆ ತರುವ ತನಕ ಕಾರಂತರು ಸ್ವತಂತ್ರರಾಗಿದ್ದಾರೆ. ಇಂತಹ ರೀತಿಯಲ್ಲಿ ಬರಹದ ಮೂಲಕ ಜೀವಿಸಬಲ್ಲ ಲೇಖಕರು ಕರ್ಣಾಟಕದಲ್ಲಿ ಎಷ್ಟು ಮಂದಿ ಇದ್ದಾರೆ? ಎಂಬುದು ಒಂದು ಸವಾಲಾಗಿದೆ. ಅದಕ್ಕೆ ಈ ಕೌಶಿಕ ಉತ್ತರವಾಗಿದ್ದಾರೆ.

ಜೀವನದ ಉದ್ದಕ್ಕೂ ಸಾಹಸಮಯವಾದ ಜೀವನವನ್ನು ನಡೆಸಿ ಅವರಲ್ಲಿ ಅನೇಕಸಲ ಸಂಜನ್ನುಂಡರೂ ಧೈರ್ಯಗೆಡದೆ ಈ ಎಪ್ಪತ್ತಾರನೇ ವರ್ಷದಲ್ಲಿ ಕೂಡ ಪರ್ಣಮಯ ವ್ಯಕ್ತಿಯಾಗಿರುವುದು ಕನ್ನಡಕ್ಕಾಗಿ ಕರ್ಣಾಟಕಕ್ಕಾಗಿ ಈಗಲೂ ಹೋರಾಡುತ್ತಿರುವುದು ಕನ್ನಡಿಗರ ಪುಣ್ಯ. ಬಾಲ್ಯದಿಂದ ಮುಪ್ಪಿನ ತನಕ ಕಾರಂತರ ಜೀವನ ಸಾಹಸ, ಹಾಗೂ ಸಾಧಕ ಜೀವನವಾಗಿದೆ. ಕನ್ನಡನಾಡ ನುಡಿಯ ಸೇವಕರಾಗಿ, ದಾರ್ಶನಿಕರಾಗಿ ದಾರಿಯ ದೀಪವಾಗಿದ್ದಾರೆ. ಕಾರಂತರು ಸದಾ ಚಲಿಸುವ ಒಂದು ವಿಶ್ವಕೋಶ. ಕಾರಂತರನ್ನು ಹಲವು ಲೇಖಕರು ನಾಟಕಕಾರ ಬರ್ನಾರ್ಡ್ ಷಾರವರಿಗೆ ಹೋಲಿಸಿದ್ದುಂಟು.

ಕಾರಂತರಿಗೆ ಸಿಕ್ಕಿದಷ್ಟು ಪ್ರಶಸ್ತಿ ಬಹುಮಾನಗಳು ಇತ್ತೀಚೆಗೆ ಯಾರಿಗೂ ಸಿಕ್ಕಿಲ್ಲ. ೧೯೫೮ ರಲ್ಲಿ ಅವರ ಯಕ್ಷಗಾನ ಬಯಲಾಟಕ್ಕೆ, ಸಾಹಿತ್ಯ ಅಕಾಡೆಮಿಯ ಬಹುಮಾನ, ೧೯೬೦ ರಲ್ಲಿ ಸ್ವೀಡನ್ ಜಾನಪದ ಅಕಾಡೆಮಿಯ ಬಹುಮಾನ, ೧೯೬೮ ರಲ್ಲಿ ಭಾರತ ಸರ್ಕಾರದ ಪದ್ಮಭೂಷಣ ಪ್ರಶಸ್ತಿ, ೧೯೭೮ ರಲ್ಲಿ ಮೂಕಜ್ಜಿಯ ಕನಸು ಕಾದಂಬರಿಗೆ ಜ್ಞಾನಪೀಠ ಪ್ರಶಸ್ತಿ ದೊರಕಿತು. ಜ್ಞಾನಪೀಠ ಪ್ರಶಸ್ತಿ ಬಂದಿರುವುದರಿಂದ ಕಾರಂತರ ಯೋಗ್ಯತೆ ಹೆಚ್ಚಾಗಲಿಲ್ಲ, ಕಾರಂತರಿಗೆ ಜ್ಞಾನಪೀಠ ಪ್ರಶಸ್ತಿ ಕೊಟ್ಟಿರುವುದರಿಂದ ಜ್ಞಾನಪೀಠದ ಯೋಗ್ಯತೆ ಹೆಚ್ಚಾಯಿತು. ಡಾ|| ಕಾರಂತರು ಇನ್ನೂ ತಮ್ಮ ಕ್ಷೇತ್ರದಲ್ಲಿ ದುಡಿಯುತ್ತಿರುವ, ಎಲ್ಲಾ ವಿಚಾರದಲ್ಲೂ ಪ್ರಾಮಾಣಿಕವಾಗಿ ಚಿಂತಿಸುವ ಜನಜೀವನವನ್ನು ಸಮಾಜದ ಅಂಕು ಡೊಂಕು ಗಳನ್ನು ತಮ್ಮ ಲೇಖನಿಯ ಮೂಲಕ, ಹರಿತವಾದ ಮಾತಿನ ಮೂಲಕ ಎತ್ತಿ ತೋರುವ ವ್ಯಕ್ತಿ. ಮಕ್ಕಳ ವಿದ್ಯಾಭ್ಯಾಸದ ಬಗ್ಗೆ, ಪಠ್ಯಕ್ರಮದ ಬಗ್ಗೆ ಅವರು ಈಗಲೂ ತೀವ್ರವಾಗಿ ಚಿಂತಿಸುತ್ತಿದ್ದಾರೆ. ನವಪೀಳಿಗೆ ಹೊಸಪರಿಸರದಲ್ಲಿ ತೀವ್ರ ಬದಲಾವಣೆಯ ಮಧ್ಯೆಯಲ್ಲಿ ಬದುಕಲು ಬೇಕಾದ ವಾತಾವರಣ ಪಠ್ಯಕ್ರಮದ ಬಗ್ಗೆ ಯೋಚಿಸುತ್ತಿದ್ದಾರೆ. ಹೀಗೆ ಹಲವು ಹತ್ತು ಕ್ಷೇತ್ರದಲ್ಲಿ ಕಾರ್ಯವೆಸಗುತ್ತಿರುವ ಇವರು ಕರ್ಣಾಟಕಕ್ಕೆ ಮಾತ್ರವಲ್ಲ ದೇಶಕ್ಕೆ ಹೆಮ್ಮೆಯ ಮಹಾನ್‌ವ್ಯಕ್ತಿ ಡಾ|| ಶಿವರಾಮ ಕಾರಂತರು.



# ಶ್ರೀ ಕುವೆಂಪು

"ಕನ್ನಡಕ್ಕಾಗಿ ಕೈ ಎತ್ತು : ನಿನ್ನ ಕೈ ಕಲ್ಪವೃಕ್ಷವಾಗುತ್ತದೆ !
ಕನ್ನಡಕ್ಕಾಗಿ ಕೊರಳೆತ್ತು : ಅಲ್ಲಿ ಪಾಂಚಜನ್ಯ ಮೂಡುತ್ತದೆ !
ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು : ಅದೇ ಗೋವರ್ಧನ-
ಗಿರಿಧಾರಿಯಾಗುತ್ತದೆ"

ಈ ಮಾತನ್ನು ಹೇಳಿದವರು, ಕನ್ನಡದ ಮಹಾಕವಿ 'ಕುವೆಂಪು'. ಅವರು ಕಂಡ ಅಖಂಡ ಕರ್ನಾಟಕದ ಕನಸು ಬಹು ದೊಡ್ಡದು. ಅವರ ಭಾವನೆ ಅತಿ ಆಳ. ನೃಪತುಂಗನೇ ಆ ರಾಜ್ಯದ ಮಹಾ ಅರಸು, ಪಂಪ ಮಹಾ ಕವಿಯೇ ಅಮಾತ್ಯ, ಬಸವೇಶ್ವರ, ನಾರಣಪ್ಪ, ಸರ್ವಜ್ಞ, ಜನ್ನ, ರನ್ನ, ರಾಘವಾಂಕ ಮುಂತಾದವರು ಸಚಿವರುಗಳು. ಇದಕ್ಕೆ ಸೇರ್ಪಡೆಯಾಗಿ ವೆಂಕಣ್ಣಯ್ಯ, ಬಿ. ಎಂ. ಶ್ರೀ, ತೀ. ನಂ. ಶ್ರೀ ಸಚಿವ ಸಂಪುಟದಲ್ಲಿ ಬೆಳಗಿದ ಮಹಾ ನಕ್ಷತ್ರಗಳು. ಇಂತಹ ಒಂದು ಕನ್ನಡದ ರಾಜ್ಯದಲ್ಲಿ ಬೆಳೆದು ಬಂದ ಮಹಾಕವಿ ನಮ್ಮ 'ಕುವೆಂಪು'.

"ಬಾರಿಸು ಕನ್ನಡ ಡಿಂಡಿಮವ, ಓ ಕರ್ನಾಟಕ ಹೃದಯ ಶಿವ!" ಎಂದು ಕನ್ನಡ ಡಿಂಡಿಮವನ್ನು ಬಾರಿಸಿ, ಕನ್ನಡಿಗರನ್ನು ಬಡಿದೆಬ್ಬಿಸಿದ್ದಾರೆ. ಕನ್ನಡ ಮಹಾಮಂತ್ರವನ್ನು ಕಹಳೆಯ ಮೂಲಕ ಕಿವಿಯಲ್ಲಿ ಊದಿದ್ದಾರೆ. ರಾಮನ ಮಹಾ ಭಕ್ತ, ರಾಮನ ಹೆಸರನ್ನು ಉಚ್ಚರಿಸದ ಕನ್ನಡಿಗನು ಅವನು ಇಷ್ಟರೂ ಒಂದೇ ಇರದಿದ್ದರೂ ಒಂದೇ. ಕನ್ನಡ ನಾಡಿನಲ್ಲಿ ಜನ್ಮವೆತ್ತಿ, ಕನ್ನಡದ ಬಗ್ಗೆ ಅಭಿಮಾನ ಪಡದವನು ನಿರುಪಯುಕ್ತ. 'ನೀನು ಕನ್ನಡಿಗನೇ ಆಗಿದ್ದ ಪಕ್ಷದಲ್ಲಿ, ದೀಕ್ಷೆಯ ತೊಡು ಇಂದೇ; ಕಂಕಣ ಕಟ್ಟಿಂದೇ!' ನಾಡನ್ನು ರಕ್ಷಿಸಲು ಕುವೆಂಪು ಕನ್ನಡಿಗನಿಗೆ ಕೊಟ್ಟ ಕರೆ ಇದು.

ಕುವೆಂಪು, ಜನ್ಮವೆತ್ತಿದ್ದು ಮಲೆನಾಡಿನ ಕುಪ್ಪಳ್ಳಿಯಲ್ಲಿ. ಒಕ್ಕಲಿಗರ ಮಗ; ತಂದೆ ವೆಂಕಟಪ್ಪ, ತಾಯಿ ಸೀತಾಮಾತೆ. ಮನೆಯೇ ಗುರುಕುಲ. ಎಲ್ಲ ವರ್ಗದ ಉಪಾಧ್ಯಾಯರು ಇವರಿಗೆ ಮಹಾ ಗುರುಗಳು. ಪ್ರಾಥಮಿಕ ವಿದ್ಯಾಭ್ಯಾಸ ಮಲೆನಾಡಿನಲ್ಲಿ. ಚಿಕ್ಕಂದಿನಲ್ಲಿರುವಾಗ ರಾಮಕಥಾ ಕಾಲಕ್ಷೇಪವೆಂದರೆ ಇನ್ನಿಲ್ಲದ ಆಸಕ್ತಿ, ವಾಲ್ಮೀಕಿಯ ಮೇಲೆ ಅಸಾಮಾನ್ಯ ಗೌರವ.

ಉನ್ನತ ವಿದ್ಯಾಭ್ಯಾಸ ಮೈಸೂರಿನಲ್ಲಿ. ಆಗಲೇ ಚರ್ಚಾಗೋಷ್ಠಿ, ಕವಿ ಗೋಷ್ಠಿಯಲ್ಲಿ ಭಾಗವಹಿಸುವಿಕೆ. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮುಂತಾದವರಲ್ಲಿ ಅಪಾರ ಭಕ್ತಿ. ಗಾಂಧೀಜಿ ಬಗ್ಗೆ ಇನ್ನಿಲ್ಲದ ಗೌರವ. ತಾಯಿ ತುಂಗೆಯ ನೀರು ಹರಿದಂತೆ, ಇವರ ವಿಚಾರಧಾರೆಯೂ! ಓದು ಕಲಿತಾಗ, ಬುದ್ಧಿ ಬೆಳೆದಾಗ ಮೊದಲು ಇಂಗ್ಲೀಷಿನ ಮೇಲೆ ವ್ಯಾಮೋಹ, ಷೇಕ್ಸ್‌ಪಿಯರ್ ಸಾಹಿತ್ಯಕ್ಕೆ ಶರಣು, ಎಂ. ಎ. ಪದವಿ, ಕವಿಗೋಷ್ಠಿಯ ಅಧ್ಯಕ್ಷಸ್ಥಾನ, ಬಿ.ಎಂ. ಶ್ರೀಯವರ ಆಶೀರ್ವಾದ. ಟಿ.ಎಸ್. ವೆಂಕಣ್ಣಯ್ಯನವರ ಪಟ್ಟದ ಶಿಷ್ಯ.

'ಕುವೆಂಪು'ರವರು ಕವಿಗಳಲ್ಲಿ, ಮಹಾಕವಿ. 'ನವಿಲು', 'ಪಕ್ಷಿಕಾಶಿ', 'ಜೇನಾಗುವ', 'ಪಾಂಚಜನ್ಯ', 'ಕಿಂಕಿಣಿ', 'ಕೃತ್ತಿಕೆ' ಮುಂತಾದ ಕೃತಿಗಳು, ವಿಶ್ವಸಾಹಿತ್ಯದಲ್ಲಿ ಉತ್ತಮ ಕವಿತೆಗಳೆನ್ನುವ ಕವನಗಳನ್ನು ಅವರು ಕನ್ನಡದಲ್ಲಿ ಬರೆದಿದ್ದಾರೆ. ಅವರದು ಶಿಶುಸಾಹಿತ್ಯದಿಂದ ಹಿಡಿದು ನಾಟಕ, ಕಾದಂಬರಿ, ವಿಮರ್ಶೆ, ಪ್ರಬಂಧ, ಜೀವನ ಚರಿತ್ರೆಯತನಕ ಲೇಖನಿಯನ್ನು ಓಡಿಸಿದ ಕೈ. ಇದರಿಂದ ಕನ್ನಡಿಗರಿಂದ ಸೈ ಎನಿಸಿಕೊಂಡ ಮಹಾಧೀರ. ಆಜಾನುಬಾಹು. ನಿಂತರೆ ಚಲಿಸಿದರೆ, ರವೀಂದ್ರರಿಗೆ ಹೋಲುವ ಶರೀರ. ನಡೆ, ನುಡಿ ಎಲ್ಲವೂ ಸತ್ಯ. ಅವರ ಜೀವನವೇ ಮಹಾ ತಪಸ್ಸು, ಇದು ಮಹಾಕವಿಯ ಲಕ್ಷಣ.

ಒಂದೇ ವ್ಯಕ್ತಿ ಎಲ್ಲವನ್ನೂ ಪಡೆಯುವುದು ಬಹುಕಷ್ಟ. ಕುವೆಂಪುರವರು ಎಂದೂ ಕೀರ್ತಿಯನ್ನು ಬೆನ್ನುಹತ್ತಿದವರಲ್ಲ, ಕೀರ್ತಿಯೇ ಕುವೆಂಪುರವರ ಬೆನ್ನು ಹತ್ತಿ ನಕ್ಷತ್ರಿಕನಾಗಿ ಕಾಡಿತು!

ಪುಟ್ಟಪ್ಪನವರು ತಾನು ಹೀಗಾಗುತ್ತೇನೆ ಎಂದು, ಕನಸು ಕಂಡಿದ್ದರೋ ಇಲ್ಲವೋ ಹೇಳುವುದು ಕಷ್ಟ. "ಕನಸು ನನಸಾಯಿತಿದೋ" ಎಂದು ಒಮ್ಮೆ ಹೇಳಿದ್ದಾರೆ.

"ಮೂಡುತಿದೆ ನೋಡು, ಅದೋ ಏಕೈಕ ಕರ್ನಾಟಕ" ಎಂದು ಕನಸಿನಲ್ಲಿ ಕೈಬೆರಳು ಮಾಡಿತೋರಿಸಿದ ಕೂಗಿನ ನೆನಪು. ಕನ್ನಡಿಗರ ಕಿವಿಯಮೇಲೆ ಸದಾ 'ಪಾಂಚಜನ್ಯ'! "ಕನಸು ನನಸಾಯಿತಿದೋ ಏಕೈಕ ಕರ್ನಾಟಕ" ಎಂದು ನಿದ್ದೆಯಿಂದ ಎಚ್ಚರಗೊಂಡ ನಂತರ ಹೇಳಿದ ಮಾತು. ಕನ್ನಡಿಗರ, ದಿಕ್‌ದಿಶೆಗಳಲ್ಲಿಯೂ ಧ್ವಜಪಟ: ಅದೇ ಅಖಂಡ ಕರ್ನಾಟಕ. ಸಾಹಿತ್ಯದ ಮಹಾತಪಸ್ಸಿನಿಂದ, ಸಿದ್ಧಿಯನ್ನು ಪಡೆದ ಮಹಾತಪಸ್ವಿ; ಅಧ್ಯಾಪಕ, ಪ್ರಾಧ್ಯಾಪಕ, ಪ್ರಿನ್ಸಿಪಾಲ್, ಕುಲಪತಿ, ಹೀಗೆ ಒಂದಲ್ಲ, ಎರಡಲ್ಲ. ಕನ್ನಡದ ನಾಡಿನಲ್ಲಿ ಕನ್ನಡ ಪುತ್ರನಿಗೆ ಅತ್ಯುನ್ನತ ಸ್ಥಾನ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡಕ್ಕೆ ಅಗ್ರಸ್ಥಾನ, ಮಾನಸ ಗಂಗೋತ್ರಿಯೆ ಕನ್ನಡ ಜನನಿಯ ತನುಜಾತೆ, ಕನ್ನಡ ಮಂತ್ರವನ್ನು ಘೋಷಿಸಲು ಮಹಾಗರ್ಭ ಗುಡಿ.

ಇಂಗ್ಲೀಷಿನಲ್ಲಿ ಮಿಲ್ಟನ್ ಮಹಾಕವಿ ರಚಿಸಿದ ಮಹಾಕಾವ್ಯದಂತೆ, ಕನ್ನಡದಲ್ಲಿ ರಾಮಾಯಣ ದರ್ಶನ ಉದಯ. ಅದು, ಗುರು ವೆಂಕಣ್ಣಯ್ಯನವರಿಗೆ ಅರ್ಪಣೆ. ಇದೋ ಮುಗಿಸಿ ತಂದಿಹೆನ್ ಈ ಬೃಹದ್‌ಗಾನಮಂ, ನಿಮ್ಮ ಸಿರಿಯಡಿಗೊಪ್ಪಿಸಲ್ಕೆ ಎಂದು, ರಾಮಾಯಣ ಮಹಾಕಾವ್ಯವಂ ರಚಿಸಿದ ಮಹಾಕವಿ ತನ್ನ ಪ್ರಿಯಗುರುವಿಗೆ ಅರ್ಪಿಸುವಾಗ ಅನನ್ಯ ಭಕ್ತಿಯಿಂದ ಅರ್ಪಿಸಿದ್ದಾರೆ. ಆ ಕಾವ್ಯಕ್ಕೆ ತಮ್ಮನ್ನೇ ಅರ್ಪಿಸಿಕೊಂಡಿದ್ದಾರೆ.

'ಕುವೆಂಪು'ರವರಿಗೆ ಸಂದ ಗೌರವ ಅಸಾಮಾನ್ಯ. ಸಾಹಿತ್ಯ ಅಕಾಡಮಿಯ ರಾಷ್ಟ್ರ ಪುರಸ್ಕಾರಯೂ, ಭಾರತ ಸರ್ಕಾರದ ಪದ್ಮಭೂಷಣ ಪ್ರಶಸ್ತಿಯೂ ರಾಜ್ಯ ಸರ್ಕಾರದ "ರಾಷ್ಟ್ರಕವಿ" ಪ್ರಶಸ್ತಿಯೂ, ರಾಮಾಯಣ ದರ್ಶನಂ ಗೆ ಭಾರತೀಯ ಜ್ಞಾನಪೀಠದ ಪುರಸ್ಕಾರವೂ ಲಭಿಸಿತು. ಕನ್ನಡನಾಡಿನ ಉದ್ದಗಲಕ್ಕೂ ಸತ್ಕಾರ, ಸನ್ಮಾನ ನಡೆಯಿತು. ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪೀಠವೂ ಲಭಿಸಿತು. ನಾಡಿಗೆ ನಾಡೇ ಕೊಂಡಾಡಿತು.

ಕವಿಯ ಕೃತಿ, ಆನೆಯ ಮೇಲಿರುವ ಅಂಬಾರಿಯಲ್ಲಿ ಕುಳಿತು ಮೆರೆಯಿತು. ಸಹ್ಯಾದ್ರಿಯ ಮಗನಿಗೆ ಅಪೂರ್ವ ಗೌರವ ಸಂದಿತು. ಇದರಿಂದ ಕುವೆಂಪುರವರು ಅತಿಯಾಗಿ ಹಿಗ್ಗಲಿಲ್ಲ. ಈ ಎಲ್ಲ ಗೌರವವೂ ಕನ್ನಡವೆಂಬ ಮಹಾತಾಯಿಗೆ ಎಂದರು. ಈ ಕವಿಗೆ ಸರಸ್ವತಿಯೇ ವಜ್ರಕರ್ಣಕುಂಡಲ. ಅವರ ಕಲ್ಪನೆಯೇ ವಿಂಧ್ಯೆಕಲ್ಪನೆ, ಅವರ ನೋಟವೇ ಭಗವಂತನ ನೋಟ, ಅವರ ಶ್ರವಣವೇ ಕನ್ನಡದ ಮಂತ್ರ. ಅವರು ಸಾಹಿತ್ಯದ ವಿಶ್ವರೂಪಿ. "ರಾಮಾಯಣ ದರ್ಶನಂ" ಮೂಡಿ ಬಂದು ಇಪ್ಪತ್ತೇಳು ವರ್ಷಕ್ಕೆ ಮೇಲಾಯಿತು. ಆದರೆ ಇಂದಿಗೂ ಆ ಕೃತಿಯ ಬಗ್ಗೆ ಜನರ ಭಾವನೆ ಹೊಸ ಹೊಸ ರೂಪವನ್ನು ತಾಳುತ್ತಲೇ ಇದೆ, ಹೊಸ ಭಾವನೆಯನ್ನು ಮೂಡಿಸುತ್ತಲೇ ಇದೆ. 'ಕುವೆಂಪು' ವಿದ್ಯಾರ್ಥಿಯಾಗಿದ್ದ ಕಾಲೇಜಿನಲ್ಲಿಯೇ ಅಧ್ಯಾಪಕರಾದರು, ಪ್ರಾಧ್ಯಾಪಕರಾದರು, ಪ್ರಿನ್ಸಿಪಾಲರಾದರು, ಕೊನೆಗೆ ಆ ಕಾಲೇಜನ್ನು ಒಳಗೊಂಡ ವಿಶ್ವವಿದ್ಯಾನಿಲಯದ ಉಪಕುಲಪತಿಗಳೂ ಆದರು. ಇದೆಲ್ಲವೂ ನಡೆದ ಒಂದು ದೈವಲೀಲೆ.

ವಾಲ್ಮೀಕಿ ಹಾಗೂ ಕುಮಾರವ್ಯಾಸ ಅನಿರೀಕ್ಷಿತವಾಗಿ ಕಣ್ಣು ಮುಚ್ಚಿದಾಗ ಆ ಸ್ಥಾನವನ್ನು ಭರ್ತಿಮಾಡಲು ಕುವೆಂಪುರವರು ಜನ್ಮ ತಾಳಿದರು. ಸಾಹಿತ್ಯ ರಂಗವಲ್ಲಿ ಹೊಸ ರಂಗವಲ್ಲಿಯನ್ನು ಹಾಕಿದರು. ಮಲೆನಾಡಿನ ಮಳೆಯಲ್ಲಿ ತೊಯ್ದರೂ ಸಾಹಿತ್ಯದ ರಚನೆಯಲ್ಲಿ ತೇಲಲಿಲ್ಲ. ಗುರುಸ್ಥಾನದಲ್ಲಿ ನಿಂತು ಮುಂದಿನ ಪೀಳಿಗೆಯನ್ನು ಸೃಷ್ಟಿಸಿದ ಮಹಾವಿಭೂತಿಯಾದರು. ತಮ್ಮಷ್ಟೇ ಕನ್ನಡದ ಬಗ್ಗೆ ಸಾರ್ವಭೌಮತ್ವವನ್ನು ಕಲ್ಪಿಸುವ ಸಾಮರ್ಥ್ಯವಿರುವ ದೇ. ಜ. ಗೌ., ಹಾ.ಮಾ. ನಾಯಕರನ್ನು ಕನ್ನಡ ತಾಯಿಯ ಮುಂದೆ ನಿಲ್ಲಿಸಿದರು. ಹಸೆಮಣೆಯಲ್ಲಿ ಕುಳ್ಳಿರಿಸಿದರು. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಶಾರದಾ ದೇವಿ ಮುಂತಾದವರನ್ನು ದೈವಸಾಕ್ಷಾತ್ಕಾರವೆಂದು ಭಾವಿಸಿದರು.

"ಕಾನೂರು ಹೆಗ್ಗಡತಿ", "ಮಲೆಗಳಲ್ಲಿ ಮದುಮಗಳು" ಈ ಎರಡು ಬೃಹತ್ ಕಾದಂಬರಿಗಳು ಕುವೆಂಪುರವರ ಕೀರ್ತಿಗೆ ಕಳಶವಿಟ್ಟ ಕೃತಿಗಳು. "ಕುವೆಂಪು" ರವರನ್ನು ನಾವು ಕಂಡಾಗ ಅವರು ಹೇಳುವ ಎಚ್ಚರದ ಮಾತಿದು: "ಎಲ್ಲಾದರೂ ಇರು, ಎಂತಾದರು ಇರು; ಎಂದೆಂದಿಗೂ ನೀ ಕನ್ನಡವಾಗಿರು". ಇಷ್ಟೆಲ್ಲಾ ಇದ್ದರೂ ಏನೂ ಇಲ್ಲದವರಂತೆ ಸರಳತೆಯಿಂದ ಇರುವುದೇ ಕುವೆಂಪುರವರಲ್ಲಿರುವ ವಿಶೇಷ ಗುಣ. ಇದು ಕನ್ನಡಿಗರ ಪುಣ್ಯ ವಿಶೇಷ.



# ಶ್ರೀ ದ. ರಾ. ಬೇಂದ್ರೆ

'ಅಂಬಿಕಾತನಯ ದತ್ತ' ಎಂಬ ಕಾವ್ಯನಾಮದಿಂದ, ಕನ್ನಡ ಕಾವ್ಯ ಪ್ರಪಂಚದಲ್ಲಿ ಈಸಾಡಿದವರು ವರಕವಿ ಡಾ॥ ದ.ರಾ. ಬೇಂದ್ರೆಯವರು. ಬೇಂದ್ರೆಯವರ ಹೆಸರೇ ಕನ್ನಡಿಗರಿಗೆ ಅತ್ಯಂತ ಪ್ರಿಯವಾದ ಶಬ್ದ. ದೊಡ್ಡವರೊಡನೆ ದೊಡ್ಡವರಾಗಿಯೂ, ಚಿಕ್ಕವರೊಡನೆ ಚಿಕ್ಕವರಾಗಿಯೂ, ಎಲ್ಲರೊಡನೆ ಸದಾ ಸಂತಸದಿಂದ ಕಾಲ ತೆಗೆಯುವ ಮಹಾ ಮಾಂತ್ರಿಕತನ, ಬೇಂದ್ರೆಯವರ ಹುಟ್ಟುಗುಣದ ಮಹಾಲಕ್ಷಣ. ಎಂಬತ್ತಮೂರು ವರ್ಷವನ್ನು ಈಗತಾನೆ ಮುಗಿಸಿ ಎಂಬತ್ತನಾಲ್ಕರ ಹೊಸಲಿನಲ್ಲಿ ಕಾಲಿಟ್ಟು, ಮುಕ್ಕಾಲು ಶತಮಾನೋತ್ಸವ ವರ್ಷವನ್ನು ಕಳೆದಿದ್ದಾರೆ. ಕೆಲವರು ವರ್ಷ ಕಳೆದಂತೆಲ್ಲಾ ಮುಪ್ಪಿನ ದಾರಿ ಕಡೆ ಹೋಗುತ್ತಾರೆ. ಇನ್ನು ಕೆಲವರು ವರ್ಷಸಾಗಿದಂತೆಲ್ಲ ಮುಪ್ಪಿನಲ್ಲೂ ಯೌವನವನ್ನು ಕಾಣುತ್ತಾರೆ. ಬೇಂದ್ರೆಯವರು ಎರಡನೇ ಪಂಥಕ್ಕೆ ಸೇರಿದವರು.

ತಮ್ಮ ಕಾಲೇಜಿನ ವಿದ್ಯಾಭ್ಯಾಸ ಮುಗಿದ ನಂತರ, ಧಾರವಾಡದಲ್ಲಿ ಗೆಳೆಯರ ಗುಂಪಿನ ಸ್ಥಾಪನೆ, ಈ ಗುಂಪು ದಿನದಿನಕ್ಕೂ ಬೆಳೆಯುತ್ತಾ, ಬಂದು ಕರ್ನಾಟಕದಲ್ಲಿ ಮನೆ ಮಾತಾಯಿತು. ಕಾವ್ಯ ಹಾಗೂ ನಾಟಕದ ರಚನೆಯ ಕಾರ್ಯ ನಡೆಯಿತು.

ದಿವಂಗತ ಆಲೂರು ವೆಂಕಟರಾಯರ ಆಶೀರ್ವಾದ, ಮುಳಿಯ ತಿಮ್ಮಪ್ಪಯ್ಯ, ಬೆಟಗೇರಿ ಕೃಷ್ಣಶರ್ಮ, ಶಂಬಾ ಜೋಶಿ ಮುಂತಾದವರ ಸಹೃದಯ ಮಾತುಗಳು, ಬೆಂಬಲಗಳಿಂದ ಕಾವ್ಯರಚನೆಗೆ ಅವಕಾಶವಾಯಿತು. ಅರವಿಂದರು, ಮಾತೆಯವರು, ಗುರುಗಳಾಗಿ ದೊರೆತರು. ಕಾವ್ಯ ಗುರುಗಳಾಗಿ ಲಕ್ಷ್ಮೀಶ, ಸರ್ವಜ್ಞರು ದೊರಕಿದರು. ಶೆಲ್ಲಿ, ಕೀಟ್ಸರ ಕಾವ್ಯಗಳು ಉದ್ದೀಪಕವಾದವು. ಕಾಲಿದಾಸ, ಜಗನ್ನಾಥ ಪಂಡಿತರ ಗೀತೆಗಳು ಬೇಂದ್ರೆಯವರನ್ನು ಸೆರೆಹಿಡಿದವು. ರವೀಂದ್ರರ ಆಂಗ್ಲ ಕವಿತೆಗಳು, ಅರವಿಂದರ ಭವಿಷ್ಯತ್ ಕಾವ್ಯ ತುಂಬುಪ್ರಭಾವವನ್ನು ಬೀರಿದವು. ಗೋಕಾಕ ಮುಗಳಿಯವರ ಸ್ನೇಹವ ಹಂದರ ಗಟ್ಟಿಯದಾಗಿ ನಿಂತಿತು. "ಜಯ ಕರ್ನಾಟಕ," "ಸ್ವಧರ್ಮ" ಪತ್ರಿಕೆಗಳು, ಬೇಂದ್ರೆಯವರ ಪ್ರಭಾವದಿಂದ, ಶಕ್ತಿಯುತವಾಗಿ ಬೆಳೆದವು.

ಬೇಂದ್ರೆಯವರ ಜೀವನ, ಆಗ ತಾನೇ ರೂಪಗೊಂಡಿಸುವ ಕಾಲದಲ್ಲಿ ಸೋದರ ವಿರಹ, ಪುತ್ರವಿರಹ, ವೃತ್ತಿಯ ಬಿಡುಗಡೆ, ತ್ಯಾಗ, ಭೋಗ, ಯೋಗ ಇದೆಲ್ಲದರ ಕಹಿ ನೀರನ್ನು ಕುಡಿಸಿತು. ಜೀವನವು ಸಾಣೆ ಹಿಡಿದ ಕತ್ತಿಯ ಹರಿತದಂತೆ, ಪರಿಪಕ್ವವಾಗಲು ಪ್ರಾರಂಭವಾಯಿತು. ಜೀವನದಲ್ಲಿ ಆಶಾಕಿರಣ ಮೂಡಿತು. ಕಾವ್ಯಸಂಪತ್ತಿಗೆ ಮೂಲವಾಯಿತು. "ಸಖೀಗೀತ", "ನಾದಲೀಲೆ" ಹೊರಬಂದವು. ನಾಡಿನ ಜನತೆಯ ಪ್ರೀತ್ಯಾದರಗಳಿಗೆ ಪಾತ್ರವಾದವು. "ಮೂರ್ತಿ ಮತ್ತು ಕಾಮಕಸ್ತೂರಿ" ಜನಮನವನ್ನು ತಣಿಸಿತು. "ಗಂಗಾವತರಣ" ಮೂಡಿಬಂತು. ಬೇಂದ್ರೆಯವರ ಕಂಠ "ಹುಬ್ಬಳ್ಳಿಯಾಂವ" ಮಧುರಗೀತೆಯನ್ನು ಹಾಡಿತು. ಮಾತು, ಉಪನ್ಯಾಸ, ಜನಪ್ರಿಯತೆಯನ್ನು ಗಳಿಸಿತು. ಧಾರವಾಡದ ತಾಯಿ, ಶಾಶ್ವತ ತಾಯಿ ಆದಳು.

ಬೇಂದ್ರೆಯವರ ಮಾತಿಗೆ ಸಿಲುಕದ ಜನವಿಲ್ಲ. ಹಾಸ್ಯದ ಹೊನಲು, ದತ್ತಾತ್ರೇಯ ಔಪಾಸಕ, ಕಂಠ ಶ್ರೀಕಂಠ, ಜನತೆಯನ್ನು ಬಡಿದೆಬ್ಬಿಸುವ ಎಚ್ಚರದ ನುಡಿ. ಆಕಾಶದಿಂದ ಪಾತಾಳ, ಪಾತಾಳದಿಂದ ಆಕಾಶಕ್ಕೆ ಜನರನ್ನ ಒಯ್ಯುವ ಮಹಾ ಮಾಂತ್ರಿಕತನ, ಸೃಷ್ಟಿಯಲ್ಲಿ ಲಯವನ್ನು ಲಯದಲ್ಲಿ ಸೃಷ್ಟಿಯನ್ನು ಸೃಷ್ಟಿಸುವ ಗಾರುಡಿಗತನ. "ನಾದಲೀಲೆ"ಯಲ್ಲಿ "ಸಖೀಗೀತ"ವನ್ನು ಹಾಡಿದಾಗ ಅವರ ಮನದಲ್ಲಿ "ಸಂಚಯ" ಮೂಡಿಬಂದಾಗ ನಿನಗೆ, ನನ್ನ "ನಮನ"ವೆಂದು "ಮರ್ಯಾದೆ"ಯಿಂದ, "ಹೃದಯ ಸಮುದ್ರ"ದ ಕಡೆಗೆ ದಾರಿತೋರಿಸಿದರು. "ಉತ್ತರಾಯಣ"ದ ಕಡೆ ಕುಳಿತು "ನಾಕು ತಂತಿ"ಯನ್ನು ಬಾರಿಸಿದಾಗ "ಶ್ರೀಮಾತೆ"ಯ ದರ್ಶನವಾಯಿತು. ನಾಡಿನ ಉದ್ದಕ್ಕೂ "ಅರಳು-ಮರಳು" ಪ್ರಸಾರವಾಯಿತು. ಬೇಂದ್ರೆಯವರ ಕಾವ್ಯಸಂಪತ್ತು, ಜಾನಪದ ಸಾಹಿತ್ಯದ

ವಿಸ್ತಾರ ಬೆಳವಣಿಗೆ ಒಂದಕ್ಕೊಂದು ಹಸಿರನ್ನು ತಂದಿತು. ತಮ್ಮ ಕಾವ್ಯವನ್ನು ಬೇಂದ್ರೆಯವರೇ ಹಾಡಿದಾಗ ನಾಡಿನ ಜನ ಪುಳಕಿತರಾದರು; ಧನ್ಯರಾದರು.

ಬೇಂದ್ರೆಯವರನ್ನು ನಾಡಿನ ಜನತೆ ಅವರ ಸೇವೆಯನ್ನು ನೆನೆದು, ಅವರ ಐವತ್ತು ವರ್ಷದಿಂದ ಸತ್ಕರಿಸುತ್ತಾ ಬಂದಿದೆ. ಬೆಂಗಳೂರು, ಮಂಗಳೂರು, ಶಿವಮೊಗ್ಗ, ಸಾಗರ ಮುಂತಾದ ಸ್ಥಳಗಳಲ್ಲಿ ಅಭೂತಪೂರ್ವವಾಗಿ ಅಪ್ಪೂರಿಯ ಸತ್ಕಾರ. ಅರವತ್ತರಲ್ಲಿ “ಅರಳು ಮರಳು” ಪ್ರಕಟಣೆ, ಸಾಹಿತ್ಯ ಅಕೇಡಮಿಯಿಂದ ಐದು ಸಹಸ್ರ ರೂಪಾಯಿಗಳೊಡನೆ, ಅಕೇಡಮಿ ಪ್ರಶಸ್ತಿ, ಪುನಃ ಊರು ಊರುಗಳಲ್ಲಿ ಸನ್ಮಾನ. ಸಾಗರದಲ್ಲಿ ಪುನಃ ಅಪ್ಪೂರಿಯ ಸನ್ಮಾನ. ಬೆಂಗಳೂರಿನಲ್ಲಿ ಸತ್ಕಾರ, ಮಂಗಳೂರಿನಲ್ಲಿ ಗೌರವ; ಶಿವಮೊಗ್ಗೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷಪಟ್ಟ. ಆಕಾಶವಾಣಿಯ ನಿಮಂತ್ರಕ, ಭಾರತ ಸರ್ಕಾರದ ಪದ್ಮಶ್ರೀ ಪ್ರಶಸ್ತಿ, ಸಾಗರ ಪ್ರಾಂತ್ಯ ಮಹಾಜನತೆಯಿಂದ ‘ಕರ್ನಾಟಕ ರತ್ನ’ವೆಂಬ ಬಿರುದು, ಇದೆಲ್ಲವೂ ಬೇಂದ್ರೆ ಎಂಬ ಒಂದೇ ವ್ಯಕ್ತಿಗೆ ಸಂದಗೌರವ, ನಾಡ ಜನತೆ ಒಂದೇ ವ್ಯಕ್ತಿಯಲ್ಲಿ ಕಂಡ ವಿಶೇಷ ಗುಣ.

ಕನ್ನಡ ನಾಡಿನ ಇತ್ತೀಚಿನ ನವೋದಯದಲ್ಲಿ, ಕವಿ ಮುದ್ದಣನ ನಾಂದಿಯ ಅನಂತರ, ಆಚಾರ್ಯ ಶ್ರೀ ಯವರ ಮಾರ್ಗದಿಂದ, ಕನ್ನಡ ಕಾವ್ಯವನ್ನು ಸ್ಥಾಪನೆ ಮಾಡಿದ ಮಹಾ ವ್ಯಕ್ತಿ ಬೇಂದ್ರೆಯವರು ಕನ್ನಡ ಕಾವ್ಯವನ್ನು ಸೇವಿಸುವ ರಸಿಕರ ಹೃದಯದಲ್ಲಿ, ಉನ್ನತ ಪೀಠವನ್ನು ವಿಾಸಲಾಗಿರಿಸಿಕೊಂಡು, ಸಾವಿರವರ್ಷಗಳಿಂದ ಕನ್ನಡ ನಾಡು ಪಡೆದಿರುವ ಕವಿ ಶ್ರೇಷ್ಠರಲ್ಲಿ ಒಬ್ಬರಾದರು. ಕವಿವರ್ಯರಾಗಿ ಕನ್ನಡದ ಆಚಾರ್ಯರಾಗಿ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಧರ್ಮಯೋಧ ರಾಗಿ, ಅರವಿಂದರ ಭಕ್ತರಾಗಿ, ಮಾತೆಯ ಶಿಷ್ಯರಾಗಿ, ದತ್ತಾತ್ರೇಯನ ಔಪಾಸಕ ರಾಗಿ, ಜ್ಞಾನ–ಆನಂದದ ಅನುಸಂಧಾನ ಜೀವನವನ್ನು ವಿಾಸಲಾಗಿಟ್ಟವರು. ಕೀರ್ತಿಯ ಬೆನ್ನು ಬೇಂದ್ರೆಯವರು ಎಂದೂ ಹತ್ತಿದವರಲ್ಲ. ಕೀರ್ತಿಯೇ ಬೇಂದ್ರೆ ಯವರ ಬೆನ್ನು ಹತ್ತಿತು. ಜೀವನವೇ ಅವರ ಸರ್ವಸ್ವವಾದುದರಿಂದ ಅವರ ಕಾವ್ಯದಲ್ಲಿಯೂ ಜೀವಾಳ ತುಂಬಿನಿಂತಿದೆ. ಇಂದಿನ ಕಾದಂಬರಿ ಯುಗದಲ್ಲಿ ಕವಿ ಯಾಗಿ ಬಾಳುವುದು ಕಷ್ಟವಾಗಿದ್ದರೂ ಕವಿ ಶ್ರೇಷ್ಠರಾಗಿ ಬೇಂದ್ರೆಯವರು ಬದು ಕಿರುವುದು ನಾಡಿನ ಪುಣ್ಯ. ಬೇಂದ್ರೆಯವರ ಸಾಹಿತ್ಯ ಸೇವೆಗೆ ನಾಡು ಧನ್ಯ.



# ಶ್ರೀ ವಿನಾಯಕ ಕೃಷ್ಣ ಗೋಕಾಕ

ಕವಿ, ವಿನಾಯಕ ಕೃಷ್ಣ ಗೋಕಾಕರದು ಸುಸಂಸ್ಕೃತ ಮನೆತನ. ಬಾಲ್ಯವನ್ನು ಅವರು ಕಳೆದುದು ತುಂಬಾ ಬಡತನದಲ್ಲಿ. ಈಗ ಎಪ್ಪತ್ತು ವರ್ಷ. ಬೆಂಗಳೂರು ವಿಶ್ವವಿದ್ಯಾನಿಲಯದ ಹಿಂದಿನ ಉಪಕುಲಪತಿಗಳು. ಅತ್ಯಂತ ವಿನಯಪರರು.

ಇವರ ತಂದೆ ಹಿಂದಿನ ಕಾಲದ ವಕೀಲರು, ಜ್ಯೋತಿಷ್ಯ ಮತ್ತು ಹಸ್ತ ಸಾಮುದ್ರಿಕದಲ್ಲಿ ಮಹಾ ಪಂಡಿತರು. ಹಿಂದೆ ಆದುದನ್ನು ಮುಂದೆ ಆಗುವುದನ್ನು ನಿರ್ದಿಷ್ಟವಾಗಿ ಹೇಳುವ ಮಹಾ ಬುದ್ಧಿವಂತ, ತನ್ನ ಕೆಲಸದಲ್ಲಿ ಅಷ್ಟೇ ನಿಷ್ಠಾವಂತ. ದೇವರಲ್ಲಿ ಅನನ್ಯ ಭಕ್ತಿ.

ಮಗ ವಿನಾಯಕರ ಮೇಲೆ ತಂದೆಯ ಪ್ರಭಾವ ವಿಶೇಷ. ವಿನಾಯಕರ ತಂದೆ ಸತ್ಯನಿಷ್ಠರು, ಗುರುಭಕ್ತರು. ಎಂತಹ ಕಷ್ಟ ಬಂದರೂ ತಮ್ಮ ನಿಲುಮೆಯನ್ನು ಬಿಟ್ಟವರಲ್ಲ.

ವಿ. ಕೃ. ಗೋಕಾಕರು ಕೂಡ ತಂದೆಯಷ್ಟೇ ನಿಷ್ಠೆ, ಭಕ್ತಿ, ಶ್ರದ್ಧೆ ಯಾವುದರಲ್ಲಿಯೂ ಕಡಿಮೆ ಇಲ್ಲದ ವ್ಯಕ್ತಿ. ಹಿಂದಿನ ಮಹಾ ಪರಂಪರೆಯನ್ನು ಎಂದೂ

ಸಡಿಲುಗೊಳಿಸಿದವರಲ್ಲ. ಗೋಕಾಕರು ಉತ್ತರ ಕರ್ನಾಟಕದ ಸವಣೂರಿನಲ್ಲಿ ೧೯೦೯ರಲ್ಲಿ ಜನ್ಮವೆತ್ತಿದರು. ಪ್ರಾಥಮಿಕ ಹಾಗೂ ಹೈಸ್ಕೂಲು ಶಿಕ್ಷಣವು ಅಲ್ಲಿಯೇ ಆಯಿತು. ಧಾರವಾಡ ಕಾಲೇಜಿಗೆ ಸೇರಿ ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಎಂ. ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ ಪಾಸಾದರು. ಇವರು ಕಾಲೇಜು ಶಿಕ್ಷಣದ ಆರಂಭದಲ್ಲಿಯೇ ದಾಂಪತ್ಯ ಜೀವನವನ್ನು ಸ್ವೀಕರಿಸಿದ್ದರು.

ಧಾರವಾಡದಲ್ಲಿ ಹಿರಿಯರಾದ ಬೇಂದ್ರೆ ಮತ್ತು ಮುಗುಳಿಯವರೊಂದಿಗೆ ಸ್ನೇಹದ ಬೆಸುಗೆ ಚೆನ್ನಾಗಿ ಬೆಳೆಯಿತು. ಈ ಮೂವರ ಹೃದಯ ಸಂಗಮ ವಾಯಿತು. ಇವರ ಪ್ರತಿಭೆಯಿಂದ ಧಾರವಾಡ ನಗರಕ್ಕೆ ಹೊಸ ಬೆಳಕು ಬಂದಿತು. ಸಾಹಿತ್ಯದ ಅಮೃತ ಮಂಥನ ನಡೆಯಿತು. ಬೇಂದ್ರೆ, ಗೋಕಾಕ ಇವರಿಂದ ಗೆಳೆಯರ ಗುಂಪು ಸೃಷ್ಟಿಯಾಯಿತು. ಈ ಗುಂಪು ಕರ್ನಾಟಕದ ಜನರ ಬಾಯಿ ಮಾತಾಯಿತು.

ಗೋಕಾಕರು ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿದರು. ಆ ಕಾಲೇಜಿಗೊಂದು ಹೊಸ ಚೇತನವನ್ನೊದಗಿಸಿಕೊಟ್ಟರು. ಅದೇ ವಿದ್ಯಾಸಂಸ್ಥೆಯ ಸಹಾಯದಿಂದ ಇಂಗ್ಲಂಡಿಗೆ ಓದಲು ಹೋದರು. ಅಲ್ಲಿ ಅಪಾರ ಅನುಭವ ಪಡೆದರು. ಅಲ್ಲಿಯ ಆಕ್ಸಫರ್ಡ್ ವಿದ್ಯಾಲಯದಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿ ಕರ್ನಾಟಕಕ್ಕೆ ಕೀರ್ತಿಯನ್ನು ತಂದರು. ಇಂಗ್ಲಂಡಿನಲ್ಲಿರುವಾಗ ದೇಹಕ್ಕೆ ಅನಾರೋಗ್ಯವಾದರೂ, ಮಾನಸಿಕವಾಗಿ ನೋವನ್ನು ಅನುಭವಿಸಿದರೂ ತಮ್ಮ ಕರ್ತವ್ಯ ಹಾಗೂ ಉದ್ದೇಶಗಳಿಗೆ ಎಂದೂ ತಪ್ಪಿ ನಡೆದವರಲ್ಲ.

ಗೋಕಾಕರು ತಮ್ಮ ಹನ್ನೊಂದನೇ ವಯಸ್ಸಿನಲ್ಲಿ ಕಾವ್ಯ ರಚನೆಗೆ ಕೈ ಹಾಕಿದರು. ಮೊದಲು ಇಂಗ್ಲೀಷಿನಲ್ಲಿ ಕೆಲ ಕವಿತೆಗಳನ್ನು ರಚಿಸಿ ಹಿರಿಯರಿಂದ "ಪರವಾ ಇಲ್ಲ" ಎಂದು ಅನ್ನಿಸಿಕೊಂಡರು. ಇವರ ಇಂಗ್ಲೀಷ ಕವಿತೆಗೆ–ಹಾಗೂ ಆಂಗ್ಲ ಸಾಹಿತ್ಯಕ್ಕೆ ಶೆಲ್ಲಿ ಕೀಟ್ಸ್, ಟೆನಿಸನ್, ವರ್ಡ್ಸ್‌ವರ್ಥ್ ಮುಂತಾದವರು ಸ್ಫೂರ್ತಿ ಒದಗಿಸಿದರು. ಕನ್ನಡದಲ್ಲಿ ಮೊದಲು ಗಳಗನಾಥರ ಕಾದಂಬರಿಗಳು ಗೋಕಾಕರ ಮೇಲೆ ತುಂಬ ಪ್ರಭಾವವನ್ನು ಬೀರಿದವು. ಅದರ ಪ್ರಭಾವದಿಂದಲೇ, ಗೋಕಾಕರು ಹಲವು ಕಾದಂಬರಿಗಳನ್ನು ರಚಿಸಿ ನಾಡಿಗೆ ಉತ್ತಮ ಸಾಹಿತ್ಯದ ಕಾದಂಬರಿಗಳನ್ನು ನೀಡಿದರು. ಇವರ ಕಾವ್ಯಕ್ಕೆ ಬೇಂದ್ರೆಯವರ ಆಶೀರ್ವಾದ, ವಿಮರ್ಶೆಗಳು ಮಹಾ ಪೋಷಕವೆನಿಸಿದವು. ಅಂತರ್ಮುಖತೆಗೆ ಬಹಿರ್ಮುಖತೆಯ ಸರಿತೂಕ ಸಿಕ್ಕಿತು.

ಇವರ ಪಾಶ್ಚಾತ್ಯ ದೇಶದ ಅನುಭವ, ಸ್ನೇಹ, ಪ್ರೀತಿ, ಸೌಂದರ್ಯ ದರ್ಶನ, ಜ್ಞಾನಭಕ್ತಿಗಳ ಜೋಡಣೆಯಿಂದ, ಅರವಿಂದರ ತತ್ವದಲ್ಲಿ ಶ್ರದ್ಧೆ ಇದ್ದುದರಿಂದ ಇವರ ಜೀವನ ಪೂರ್ಣತೆಯ ಕಡೆಗೆ ಹರಿಯಿತು. ಗೋಕಾಕರ "ಪಯಣ" "ಕಲೋಪಾಸಕ" ಕವನ ಸಂಕಲನಗಳು ನಾಡಿನಲ್ಲಿ ಕಾವ್ಯಸಂಪತ್ತಿಗೆ ಸ್ಥಿರವಾದ ರೂಪವನ್ನು ಕೊಟ್ಟ ಕೃತಿಗಳು.

ವ್ಯಕ್ತಿಯಲ್ಲಿ ಆಗಾಗ ತಲೆದೋರುವ ನೋವು-ನಲಿವು, ಸತ್ಯ-ಸೌಂದರ್ಯ, ಬಡತನ-ಸಿರಿತನ, ಇವೆಲ್ಲವರ ಪ್ರತಿಬಿಂಬವೇ ಈ ಮೇಲಿನ ಎರಡು ಕೃತಿಗಳ ಜೀವಾಳ. ಇವರ "ಸಮುದ್ರ ಗೀತೆ" ಹಾಗೂ "ಅಭ್ಯುದಯ" ಕೃತಿಗಳು, ನವ್ಯದ ಮಾರ್ಗವನ್ನು ಎತ್ತಿ ಹಿಡಿದ ಕೃತಿಗಳೆಂದು ಪ್ರತೀತಿ ಇದೆ. ಇವರು ವಿದೇಶ ಪ್ರವಾಸದಿಂದ ಮರಳಿ ಭಾರತಕ್ಕೆ ಬಂದ ನಂತರ ಈ ಕೃತಿಗಳು ಪ್ರಕಟವಾದವು. ಈ ಕೃತಿಗಳಲ್ಲಿ ಇಂಗ್ಲೀಷ ಕವಿತೆಗಳ ಭಾವವೂ ಮೂಡಿ ನಿಂತಿದೆ ಎಂದು ವಿಮರ್ಶಕರು ಅಭಿಪ್ರಾಯಪಟ್ಟರು. ನಿಜವಾಗಿ ಈ ಕವಿತೆಗಳಲ್ಲಿ ಭಾರತೀಯ ಜೀವನದ ಪ್ರತಿಬಿಂಬವೇ ತುಂಬಿದೆ. ಸೌಂದರ್ಯ, ತೃಪ್ತಿ ಇವುಗಳು ಈ ಕಾವ್ಯದಲ್ಲಿ ಹಾಸುಹೊಕ್ಕಾಗಿ ನಿಂತಿವೆ.

ಇವರ "ಬಾಳದೇಗುಲ"ದಲ್ಲಿ ಹಾಗೂ "ಉಗಮ" ಕಾವ್ಯಸಂಗ್ರಹ ಈ ತಲೆಮಾರಿನ ಕಾವ್ಯರಚನೆಗೆ ಹೊಸ ಚೈತನ್ಯ ತುಂಬಿಕೊಟ್ಟವು. ನವ್ಯದ ಮಾರ್ಗವನ್ನು ಹಿಡಿದರೂ ವಾಸ್ತವಿಕತನವನ್ನು ಕಳೆದುಕೊಳ್ಳದೆ-ವ್ಯಕ್ತಿಯ ಹೃದಯಕ್ಕೆ ತಾಗುವಂತೆ ಗೋಕಾಕರು ಬರೆದರು. ಇದರಲ್ಲಿರುವ ಕವಿತೆಗಳು ನಿತ್ಯಜೀವನದಲ್ಲಿ ಅರವಿಂದರ ದರ್ಶನ ಮಾಡಿಸುವ ಮಹಾನೀಯ ಕೃತಿ. ಸೌಂದರ್ಯೋಪಾಸನೆ, ಸತ್ಯಪ್ರಿಯತೆ, ವಾಸ್ತವಿಕತೆ, ನೈಜತೆ ಇವೆಲ್ಲವೂ ಈ ಕಾವ್ಯಗಳಲ್ಲಿ ತತ್ವಶಃ ಮೂಡಿ ಬಂದ ಮಹಾಬೆಳಕು. ಗೋಕಾಕರ ಕಾವ್ಯ ಲಹರಿ, ನಿತ್ಯ ನೂತನ, ನಿತ್ಯ ಸಾಹಿತ್ಯ ಸಂಪತ್ತು ಬಾಳದೇಗುಲ. ಕವಿ, ಕಾದಂಬರಿಕಾರ, ವಿಮರ್ಶಕ, ಶಿಕ್ಷಣ ವೇತ್ತ, ವಾಗ್ಮಿ, ವಿನಯಶೀಲ, ಸ್ನೇಹಪರ, ಪ್ರಸಿದ್ಧ ಪ್ರಾಚಾರ್ಯ ಇವೆಲ್ಲ ವಿಶಿಷ್ಟ ಗುಣಗಳು ಒಬ್ಬ ವ್ಯಕ್ತಿಯಲ್ಲಿಯೇ ಗುರುತಿಸುವುದು ಕಷ್ಟಕರ. ಅಂತಹ ವ್ಯಕ್ತಿತ್ವ ಪಾಂಡಿತ್ಯ ಪ್ರತಿಭೆಯನ್ನು ಕವಿ ವಿನಾಯಕರು ತಮ್ಮಲ್ಲಿ ತೋರಿಸಿಕೊಟ್ಟಿದ್ದಾರೆ.

ಇಂಗ್ಲೆಂಡಿನಿಂದ ಮರಳಿ ಬಂದ ಗೋಕಾಕರು, ಸಾಂಗಲಿಯಲ್ಲಿ ಪ್ರಿನ್ಸಿಪಾಲರಾಗಿ ನೇಮಕ ಹೊಂದಿದರು. ಆಗ ಗೋಕಾಕರಿಗೆ ಕೇವಲ ಮೂವತ್ತು ವರ್ಷ. ಅಲ್ಲಿನ ವಿದ್ಯಾಸಂಸ್ಥೆಯ ಸದಸ್ಯರ ವಿಷ ಚಕ್ರದಲ್ಲಿ ಸಿಲುಕಿ ಒದ್ದಾಡಿ ಒಬ್ಬ

ನಿಷ್ಕಾಮಕರ್ಮ ಯೋಗಿಗೆ ಸಿಲುಕಿದ ಒತ್ತಡ ರುದ್ರ ನಾಟಕದಿಂದ ಬೆಂದು ಬೇಸತ್ತ ವಿನಾಯಕರು ಕೇವಲ ನಾಲ್ಕು ವರ್ಷ ತುಂಬುವುದರೊಳಗಾಗಿ ರಾಜೀನಾಮೆ ಇತ್ತು ಹೊರ ಬಂದರು. ಆಗ ವೃದ್ಧಾಪ್ಯದ ತಂದೆ-ತಾಯಿ, ಹಣಕ್ಕಾಗಿ ತೊಂದರೆ, ಪರ ಪಾಟ, ನಿರುದ್ಯೋಗ ಇವೆಲ್ಲವನ್ನೂ ಅನುಭವಿಸಿದರು. ಯಾರಿಗಾಗಿ, ಯಾತಕ್ಕಾಗಿ ಈ ಜೀವನೆಂಬ ಪ್ರಶ್ನೆ ಸದಾ ಅವರನ್ನು ಕಾಡುತ್ತಿತ್ತು. ಪ್ರಿನ್ಸಿಪಾಲರ ಹುದ್ದೆ ಬೇಡವೆಂದು ನಿರ್ಧಾರ.

ಹೈದರಾಬಾದಿನಲ್ಲಿ ಪ್ರಾಧ್ಯಾಪಕರಾಗಿ ಕೆಲಸ. ಅಲ್ಲಿ ಸುಮಾರು ಒಂದೂವರೆ ವರ್ಷಗಳ ಕಾಲ ಕೆಲಸ. ಅಲ್ಲಿಯೂ ನಿರಾಶೆ ಅತೃಪ್ತಿ. ಪ್ರಾಧ್ಯಾಪಕ ಕೆಲಸ ದಲ್ಲಿದ್ದರೂ ಕಾರಕೂನನನ್ನು ಕಂಡಂತೆ ಕಾಣುವಿಕೆ. ಸ್ವಾಭಿಮಾನಕ್ಕೆ ಧಕ್ಕೆ ಒಂದಾಗ ಹುದ್ದೆಗೆ ಶರಣು. ವೀಸನಗರದಿಂದ ಕರೆ. ಅಲ್ಲಿ ಮತ್ತೆ ಪ್ರಿನ್ಸಿಪಾಲ ರಾಗಿ ನೇಮಕ.

ಅಲ್ಲಿಯು ಕಾಲೇಜಿನ ಉದ್ಧಾರ, ವಿದ್ಯಾಸಂಸ್ಥೆಗೆ ಗೋಕಾಕರಿಂದ ಅಪಾರ ಕೀರ್ತಿ. ಜಪಾನ, ಅಮೇರಿಕಾ ಪ್ರವಾಸ, ಇದರಿಂದ ಗೋಕಾಕರಲ್ಲಿ ಹೊಸ ಹುರುಪು, ಹೊಸ ಅನುಭವ ಮೂಡಿತ್ತು. ಹಲವು ಕಾಲೇಜುಗಳಲ್ಲಿ ಕೆಲಸ ಮಾಡಿ ಮನಸ್ಸು ಕೂಡ ಮಾಗಿತ್ತು. ವೀಸನಗರದಿಂದ ಕೊಲ್ಹಾಪುರದ ರಾಜಾರಾಮ ಕಾಲೇಜಿಗೆ, ಅಲ್ಲಿಂದ ಧಾರವಾಡಕ್ಕೆ ಪ್ರಿನ್ಸಿಪಾಲರಾಗಿ ಬಂದಿರುವುದು ಗೋಕಾಕರ ಜೀವನದಲ್ಲಿ ಬಹು ದೊಡ್ಡ ಸಾಧನೆ, ದೈವಸಂಕಲ್ಪ. ಮತ್ತೆ ಹೈದರಾಬಾದಿಗೆ ಪ್ರಯಾಣ. ಅಲ್ಲಿ ಆಗ ತಾನೆ ಆರಂಭವಾದ ಇಂಗ್ಲೀಷ ಸಂಸ್ಥೆಯ ನಿರ್ದೇಶಕರಾಗಿ ಕೆಲಸ. ಹೈದರಾಬಾದಿನಲ್ಲಿ ಗೋಕಾಕರು ಒಬ್ಬ ಮಹಾ ಶಕ್ತಿಯಾಗಿ ಕಂಡರು.

ನಂತರ ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ. ಹೊಸದಾಗಿ ಜನ್ಮವೆತ್ತಿದ ಈ ಶಿಶುವಿಗೆ ಹಾಲೆರೆದು ಸಾಕಿದರು ವಿನಾಯಕರು. ಕನ್ನಡದ ಕಲ್ಯಾಣನಗರದಲ್ಲಿ ಸ್ಥಾಪನೆಯಾದ ಈ ವಿಶ್ವವಿದ್ಯಾನಿಲಯವನ್ನು ಬಹು ದೊಡ್ಡ ವಿಶ್ವವಿದ್ಯಾನಿಲಯವನ್ನಾಗಿ ಮಾಡಬೇಕೆಂಬ ಕನಸು ಗೋಕಾಕರದು. ಆದರೆ, ಅದರ ಮುಂದೆ ನಿಂತ ಅಡ್ಡಿ ಆತಂಕಗಳು ಹಲವು. ವಿದ್ಯಾರ್ಥಿಗಳ ಆಂದೋಲನ, ದೊಂಬಿ ಮುಂತಾದವು ಗೋಕಾಕರ ಮನಸ್ಸಿನಲ್ಲಿ ಬಹು ನಿರಾಶೆಯನ್ನು ಮೂಡಿಸಿತು. ಯಾರೂ ಎಂದೂ ನಿರೀಕ್ಷಿಸದೇ ಇದ್ದ ಬೃಹತ್ ಸಾಧನೆ, ಕೇವಲ ಮೂರು ವರ್ಷ ಗಳಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಬೃಹತ್ ವಿದ್ಯಾಮಂದಿರವನ್ನಾಗಿ ಮಾಡಿದ ಕೀರ್ತಿ ಅವರದು. ಉತ್ತಮ ಆಡಳಿತಗಾರರಾದ ಗೋಕಾಕರು ವಿದ್ಯಾರ್ಥಿ

ಗಳಿಗೊಬ್ಬ, ಯೋಗ್ಯ ಗುರುವರ್ಯ, ವಿನಯಸಂಪನ್ನರು, ಸಜ್ಜನಿಕೆಯ ಮಹಾ ನಿಧಿ.

ಇವರ ಪ್ರತಿಭೆ, ಪ್ರಭಾವ ಸದ್ಗುಣಗಳನ್ನು ಮೆಚ್ಚಿದ ಕೇಂದ್ರ ಸರಕಾರದಿಂದ ಪದ್ಮಶ್ರೀ ಪ್ರಶಸ್ತಿ. ನಾಡಿನಾದ್ಯಂತ, ಅವರ ಅರವತ್ತನೇ ಜನ್ಮದಿನ ಆಚರಣೆ, ನಿಧಿಸಮರ್ಪಣೆ. ವಿ.ಕೃ. ಗೋಕಾಕರನ್ನು ಸತ್ಕರಿಸಲು ರಾಜ್ಯದ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಸಮಿತಿ ರಚನೆ. ಹತ್ತುಲಕ್ಷ ರೂಪಾಯಿ ನಿಧಿ ಶೇಖರಿಸಿ, ಗೋಕಾಕರ ಹೆಸರಿನಲ್ಲಿ ವಿದ್ಯಾಸಂಸ್ಥೆಯನ್ನು ತೆರೆಯುವ ಯೋಗ್ಯನಿರ್ಧಾರ. ಕವಿಕಾವ್ಯ ಮಹೋನ್ನತಿಗೆ, ಉನ್ನತಹುದ್ದೆಯಲ್ಲಿರುವ ಜನ ಮಾಡಬೇಕಾದ ಮೊದಲ ಕರ್ತವ್ಯ.

ಇವರು ಸಮುಪ್ರದಾಚೆಗೆ ಸಂಚರಿಸಿದ ಮಹಾ ಅನುಭವದ ಬೃಹತ್ ಮೊದಲ ಕಾದಂಬರಿ, "ಸಮರಸವೇ ಜೀವನ" ಜನಪ್ರಿಯತೆ ಗಳಿಸಿದ ಮಹಾ ಮೇರುಕೃತಿ. ಸಾಹಿತ್ಯದ ಮಹಾದೇಗುಲದಲ್ಲಿ ವಿನಾಯಕರ ಆರಾಧನೆ, ನಾಡಿನಲ್ಲಿ ನಡೆದಿದೆ. ಸಾಹಿತ್ಯ ಸಮ್ಮೇಳನದ ಅಧ್ಯಕ್ಷಪಟ್ಟವೂ ಲಭಿಸಿದೆ. ಗೋಕಾಕರ ವ್ಯಕ್ತಿತ್ವ ವರ್ಣಮಯ ವ್ಯಕ್ತಿತ್ವ. ಅವರು ಉನ್ನತ ಹುದ್ದೆಯಲ್ಲಿದ್ದರೂ ತಮ್ಮ ಸಜ್ಜನಿಕೆಯನ್ನು ಕಳೆದುಕೊಂಡವರಲ್ಲ. ಅವರು ತಲೆಗೆ ಗಾಜಿನ ಗುಂಡುಬಿದ್ದರೂ ತಾಳ್ಮೆ ಕಳೆದು ಕೊಂಡ ವ್ಯಕ್ತಿಯಲ್ಲ. ಇವರ ನಿಲುವು, ವ್ಯಕ್ತಿತ್ವ, ಕನ್ನಡ ಕಾವ್ಯ ಜಗತ್ತಿಗೊಂದು ಶಿಖರಪ್ರಾಯ.



# ಶ್ರೀ ಅ. ನ. ಕೃಷ್ಣರಾಯರು

ಕನ್ನಡದ ಖ್ಯಾತ ಕಾದಂಬರಿಕಾರ, ಅ. ನ. ಕೃ. ಇಂದು ಬದುಕಿದ್ದರೆ, ಅವರಿಗೆ ಎಪ್ಪತ್ತು ವರ್ಷ ತುಂಬುತ್ತಿತ್ತು. ಆಗ ಕನ್ನಡಿಗರು ಅ. ನ. ಕೃ. ಗೆ ಎಪ್ಪತ್ತು ವರ್ಷ ಹೌದೇ ? ಎಂದು ಆಶ್ಚರ್ಯಪಡುತ್ತಿದ್ದರು. ಸದಾ ಯೌವನ, ಸದಾ ಹುರುಪು, ಸದಾ ಕನ್ನಡದ ಕೆಚ್ಚು, ಇವು ಅ. ನ. ಕೃ. ರವರ ಜೀವನದ ಮೌಲ್ಯ. ಒಮ್ಮೆ, ಸಾಗರದ ಪುರಭವನದಲ್ಲಿ, ಜಿಲ್ಲಾ ಬರಹಗಾರ ಮಂಡಳಿಯ ಆಶ್ರಯದಲ್ಲಿ, ಅ. ನ. ಕೃ. ರವರ ಭಾಷಣ. ಸಭೆ ಕಿಕ್ಕಿರಿದು ತುಂಬಿದೆ. ಜನ ಸಾಗರ ಅ. ನ. ಕೃ. ಅವರ ಭಾಷಣ ಕೇಳಲು ಬಂದಿದ್ದಾರೆ. ಕಾಲಕ್ಕೆ ತಕ್ಕಂತೆ ಸಭೆ ಪ್ರಾರಂಭ, ಅ. ನ. ಕೃ. ಪುರಭವನದ ಗೋಡೆಯ ಮೇಲೆ ಅಂಟಿಸಿದ್ದ ಭಾವ ಚಿತ್ರಗಳನ್ನು ನೋಡುತ್ತ ಕುಳಿತರು. ತಮ್ಮ ಭಾಷಣದಲ್ಲಿ ಇವನ್ನು ಪ್ರಸ್ತಾಪಿಸಿ, ಪುರಸಭೆಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕನ್ನಡದ ಸಾಹಿತಿಗಳ ಬಗ್ಗೆ ಅಭಿಮಾನವಿಲ್ಲವೆಂದು ತೋರುತ್ತದೆ. ನಾನೇನಾದರೂ ಈ ರಾಜ್ಯದ ಮುಖ್ಯ ಮಂತ್ರಿಯಾಗಿದ್ದರೆ, ಕರ್ನಾಟಕದ ಪ್ರತಿಯೊಂದು ಪುರಭವನದಲ್ಲೂ, ಬಿ. ಎಂ. ಶ್ರೀ, ಡಿ.ವಿ.ಜಿ., ಮಾಸ್ತಿ, ಬೇಂದ್ರೆ, ಕುವೆಂಪು ಮುಂತಾದ ಕವಿಗಳ ಭಾವಚಿತ್ರ ವನ್ನು ಹಾಕಲು ಹುಕುಂ ಮಾಡುತ್ತಿದ್ದೆ ಎಂದಾಗ, ಜನ ಚಪ್ಪಾಳೆಯ ಸುರಿ ಮಳೆ. ಸರಿ, ಸರಿ, ಎಂಬ ಕೂಗು ಈಗಲೂ ನನ್ನ ಕಣ್ಣ ಮುಂದೆ ನಿಂತಿದೆ. ಅಂದಿನ ಸಭೆಯ ಅಧ್ಯಕ್ಷತೆಯನ್ನು ಪುರಸಭಾ ಅಧ್ಯಕ್ಷರೇ ವಹಿಸಿದ್ದರು. ಅ. ನ. ಕೃ. ರವರಿಗೆ, ಕನ್ನಡ ಪ್ರಶ್ನೆ ಬಂದಾಗ, ಕನ್ನಡ ಸಾಹಿತ್ಯದ ಪ್ರಶ್ನೆ ಬಂದಾಗ,

ಯಾರ ಹಂಗೂ ಇಲ್ಲ, ಯಾರ ದಾಕ್ಷಿಣ್ಯವೂ ಇಲ್ಲ. ಇದು, ಕೃಷ್ಣರಾಯರ ಜೀವನದ ಪರಮೋಚ್ಚ ನಿಲುವು.

ಅ. ನ. ಕೃ. ಓದು ಕಲಿತದ್ದು ಕಡಿಮೆ, ಬರಹ ಕಲಿತದ್ದು ಜಾಸ್ತಿ. ಗುಮಾಸ್ತೆ ಓದುವ ಶಾಲೆಗೆ ಶರಣು ಹೊಡೆದು, ಕನ್ನಡ ಸಾಹಿತ್ಯ ಶಾಲೆಯ ಪರೀಕ್ಷೆಯಲ್ಲಿ ಉತ್ತೀರ್ಣರಾದರು; ಕಾದಂಬರೀ ಸಾರ್ವಭೌಮರಾದರು.

ಕತೆಗಾರ, ನಾಟಕಕಾರ, ಕನ್ನಡ ಚಳುವಳಿಗಾರ, ಕಾದಂಬರಿಕಾರ, ಭಾಷಣಕಾರ, ಕೆಚ್ಚುಗಾರ, ಶೀಲ–ಅಶ್ಲೀಲತೆಗಳ ಬಗ್ಗೆ ವಿಮರ್ಶೆಗಾರ, ಒಬ್ಬ ಸಾಹಿತಿ ಬರಹದಿಂದಲೇ ತಾನು ಬದುಕಿ ಮನೆಯ ಮಡದಿ–ಮಕ್ಕಳನ್ನು ರಕ್ಷಿಸಿದ ಆದರ್ಶಕಾರ. ಇಂಥ ಒಬ್ಬ ಕನ್ನಡದ ಧೀಮಂತ ವ್ಯಕ್ತಿಯನ್ನು ಕನ್ನಡಿಗರು ಪಡೆದಿದ್ದುದು ಈ ಕಾಲದ ಪುಣ್ಯ ವಿಶೇಷ.

ಅ. ನ. ಕೃ.ರ ಸಾಹಿತ್ಯ ಎಲ್ಲರಿಗೂ ಬೇಕು, ಮಕ್ಕಳಿಂದ ಹಿಡಿದು ಮುದುಕರ ತನಕ. ಗಂಡಸರು--ಹೆಂಗಸರು, ವಿದ್ಯಾರ್ಥಿಗಳು, ಕೂಲಿಕಾರರು, ವ್ಯಾಪಾರಿಗಳು, ಶ್ರೀಮಂತರು, ಬಡವರು, ಎಲ್ಲರಿಗೂ ಅ. ನ. ಕೃ.ರವರ ಸಾಹಿತ್ಯವೆಂದರೆ ಮೆಚ್ಚುಗೆ. ಅಚ್ಚಾದ ಪುಸ್ತಕ ಹೊರ ಬರುವುದೇ ತಡ, ಇಂದು, ರಾಜಕುಮಾರರ ಚಿತ್ರ ನೋಡಲು ಟಾಕೀಸುಗಳ ಮುಂದೆ ಕ್ಯೂ ನಿಂತ ಹಾಗೆ, ಪುಸ್ತಕದ ಅಂಗಡಿ ಮುಂದೆ ಓದುಗರ ಕ್ಯೂ, ಇದೊಂದು ಕಣ್ಣಿಗೆ ಹಬ್ಬ. ಕನ್ನಡ ಸಾಹಿತ್ಯಕ್ಕೊಂದು ಕಿರೀಟ. "ನಟ ಸಾರ್ವಭೌಮ" ಕಾದಂಬರಿಯನ್ನು ಬರೆದು, ಕಾದಂಬರಿ ಸಾರ್ವಭೌಮ ಗಳಿಸಿದೆ. ಸಂಧ್ಯಾರಾಗ, ಉದಯರಾಗ, ತಾಯಿಕರುಳು, ರುಕ್ಮಿಣಿ, ಗೃಹಲಕ್ಷ್ಮಿ ಒಂದು ದೃಷ್ಟಿಯ ಕಾದಂಬರಿಯಾದರೆ, ನಟ ವರದಾಚಾರ್ಯರನ್ನು ಹಿನ್ನೆಲೆಯಾಗಿಟ್ಟುಕೊಂಡು ನಟ ಸಾರ್ವಭೌಮ ಸೃಷ್ಟಿಯಾಯಿತು. ಸಮಾಜದಲ್ಲಿ ನಡೆಯುವ ಅನೀತಿಯನ್ನು ಎತ್ತಿ ತೋರಿಸುವ ಕೃತಿ, ನಗ್ನ ಸತ್ಯ, ಶನಿ ಸಂತಾನ, ಸಂಜೆಗತ್ತಲು ಸೃಷ್ಟಿಯಾಯಿತು.

ವರದಾಚಾರ್ಯರು ನಾಟಕವಾಡಲು ಆಧುನಿಕ ನಾಟಕದ ಕರ್ತೃಗಳು ಇಲ್ಲವೆಂದು ಕೊರಗುತ್ತಿರುವಾಗ, ನಾನಿದ್ದೇನೆ ಎಂದು 'ಮದುವೆಯೋ ಮನೆ ಹಾಳೋ' ಎಂಬ ನಾಟಕವನ್ನು ಬರೆದು ಕೊಟ್ಟರು. ಅದು ರಂಗಭೂಮಿಯ ಮೇಲೆ ಯಶಸ್ವಿಯಾದಾಗ, ಆಗ ಕೃಷ್ಣರಾಯರಿಗೆ ಹದಿನೇಳು ವರ್ಷ ಪ್ರಾಯ. ಆ ನಂತರದಲ್ಲಿ ರಜಪೂತ ಲಕ್ಷ್ಮಿ, ಸ್ವರ್ಣಮೂರ್ತಿ, ಹಿರಣ್ಯಕಶಿಪು, ಆಹುತಿ, ಜಗಜ್ಯೋತಿ ಬಸವೇಶ್ವರ ಮುಂತಾದ ನಾಟಕಗಳು ಸೃಷ್ಟಿಯಾದವು. ರಂಗಭೂಮಿಯ ಮೇಲೆ ಮೆರೆದವು.

ಮೈಸೂರು ರಾಜ್ಯಕ್ಕೆ ಕರ್ನಾಟಕ ರಾಜ್ಯವೆಂದು ಹೆಸರಿಡುವುದಕ್ಕೆ, ಕರ್ನಾಟಕ ಏಕೀಕರಣವಾಗುವುದಕ್ಕೆ ಭಾಷೈಕ್ಯ ಸಾಧನೆಗೆ ಅ. ನ. ಕೃ.ರವರ ಪ್ರಯತ್ನ ಹೆಚ್ಚಿನದಾಗಿ ಸಂದಿದೆ. ನಾಡಿನ ಉದ್ದಗಲಕ್ಕೂ ಸಂಚರಿಸಿ, ನಾಡು ನುಡಿ ಬಂದಾಗಲು ಸ್ಪಂದಿಸಿದರು. ಕನ್ನಡಿಗರಲ್ಲಿ ಒಂದು ಹೊಸ ವಿಚಾರವನ್ನು ತುಂಬಿದರು, ಅದರಿಂದ ಸಾಧನೆಗೈದರು.

ಅ. ನ. ಕೃ.ರ ಭಾಷಣವೆಂದರೆ ಕಣ್ಣಿಗೂ ಕಿವಿಗೂ ಆನಂದ, ಮಾತು ನಿರರ್ಗಳ. ವಿಷಯ ಯಾವುದೇ ಇರಲಿ, ಅದಕ್ಕೆ ಆಧಾರ ಸಹಿತವಾದ ಪ್ರತಿಪಾದನೆ. ಪಂಪ, ರನ್ನ, ಜನ್ನ, ಕಾಳಿದಾಸ, ರಾಘವಾಂಕ, ಸರ್ವಜ್ಞ, ಬಸವೇಶ್ವರ, ರಾಮಕೃಷ್ಣ ಪರಮಹಂಸ, ಅಲ್ಲಮ ಪ್ರಭು, ಗಾಂಧೀ, ಬುದ್ಧ, ಅಲ್ಲಾ, ಏಸು ಹೀಗೆ ಯಾರದಾದರೂ ಸರಿಯೇ, ಪೂರ್ವ ಸಿದ್ಧತೆ ಇಲ್ಲದೆ ಪಟಾಕಿ ಸರ ಹಚ್ಚಿದಂತೆ ಪಟ ಪಟನೆ, ಕೇಳುವ ಶ್ರೋತೃಗಳಿಗೆ ಅಚ್ಚರಿ. ಮಾತಿನ ಕೊನೆಯಲ್ಲಿ ಕರ್ನಾಟಕದ ಪರಂಪರೆಯ ಬಗ್ಗೆ ಪ್ರಸ್ತಾಪವಾಗಲೇಬೇಕು. ನಮ್ಮ ಸಂಸ್ಕೃತಿಯನ್ನು ಹೇಳಲೇಬೇಕು, ಧೈರ್ಯ, ಶೌರ್ಯ, ಸಾಹಸವನ್ನು ಕನ್ನಡಿಗರಿಗೆ ನೆನಪು ಮಾಡಿ ಕೊಡಲೇಬೇಕು.

ಪ್ರಗತಿಶೀಲ ಸಾಹಿತ್ಯದ ಹುಟ್ಟು ಹೋರಾಟದಲ್ಲಿ ಅ.ನ.ಕೃ.ರವರಿಗೆ ಸಿಂಹ ಪಾಲು ಸೇರಲೇಬೇಕು. ರಾಮ, ಕೃಷ್ಣರ ಚರಿತ್ರೆಯನ್ನು ಓದಿ ಕಣ್ಣಿಗೆ ಒತ್ತಿಕೊಳ್ಳುತ್ತಿದ್ದ ಕಾಲದಲ್ಲಿ, ನಿತ್ಯವೂ ಕಣ್ಣಿನಲ್ಲಿ ನೋಡಿ, ಜೀವನದಲ್ಲಿ ಕ್ಷಣ ಕ್ಷಣಕ್ಕೂ ಅನುಭವಿಸುವ ವಿಷಯಗಳ ಬಗ್ಗೆ ಓದುಗರ ಗಮನ ಸೆಳೆದು ಪ್ರಗತಿಶೀಲ ಪಂಥವನ್ನು ಬೆಳೆಸಿದರು. ಪ್ರಗತಿಶೀಲ ಸಾಹಿತ್ಯವನ್ನು ಸೃಷ್ಟಿಸಿದರು

ಅ. ನ. ಕೃ. ಗರಡಿಯಲ್ಲಿ, ತ. ರಾ. ಸು., ನಾಡಿಗೇರ ಕೃಷ್ಣರಾವ್, ಎಂ. ರಾಮಮೂರ್ತಿ, ಟಿ. ಮಹಾಬಲೇಶ್ವರ ಭಟ್ಟ, ಅರ್ಚಕ ವೆಂಕಟೇಶ, ಬೀಚಿ, ಕುಮಾರ ವೆಂಕಣ್ಣ ಮುಂತಾದವರು ಇದ್ದು, ಅ. ನ. ಕೃ. ಸಾಹಿತ್ಯ ರಥವನ್ನು ಎಳೆದರು.

ಕನ್ನಡ ಸಾಹಿತ್ಯ ಪರಿಷತ್ತಿಗೂ, ಅ. ನ. ಕೃ. ರವರಿಗೂ ಎಣ್ಣೆ ಸೀಗೇಕಾಯಿ ಇದ್ದ ಹಾಗೆ. ಪರಿಷತ್ತು ಮಾಡಬೇಕಾದ ಕೆಲಸ ಮಾಡದೇ, ಮಂತ್ರಿಗಳ, ಸರ್ಕಾರಿ ಅಧಿಕಾರಿಗಳ ಮುಂದೆ ಬೆನ್ನು ಬಾಗಿಸಿ, ಕೈ ಮುಗಿದು ನಿಂತಿದೆ. ಇದು ಹೇಸಿತನ ಎಂದು ಅ. ನ. ಕೃ.ರವರ ಅಭಿಪ್ರಾಯ. ಕರ್ನಾಟಕದಲ್ಲಿ ಕನ್ನಡ

ಸಾಹಿತ್ಯ ಪರಿಷತ್ತಿನ ಬಾಗಿಲಿಗೆ, ಸರಕಾರ ಬಂದು ಸಲಹೆ ಕೇಳಬೇಕೇ ಹೊರತು, ಪರಿಷತ್ತು ಸರ್ಕಾರದ ಬಾಗಿಲಿಗೆ ಹೋಗಿ ಕೈ ಮುಗಿಯಬಾರದು ಎಂಬುದೇ ಅ. ನ. ಕೃ. ವಾದ. ಪರಿಷತ್ತು ತಾನು ಮಾಡಬೇಕಾದ ಕೆಲಸ ಮಾಡದೆ, ಸಾಹಿತಿಗಳಿಗೆ ಮಾರ್ಗದರ್ಶನ ಮಾಡದೆ ಬೊಜ್ಜು ಬೆಳೆಸಿಕೊಳ್ಳುತ್ತಿದೆ ಎಂಬುದು ಇನ್ನೊಂದು ವಾದ. ಈ ಎರಡೂ ವಾದಗಳಿಂದಲೂ ಅ. ನ. ಕೃ.ರವರ ವಾದವೇ ಮೇಲಾಯಿತು. ಈ ವಾದ-ವಿವಾದದ ಮಧ್ಯೆ, ೧೯೬೧ ರಲ್ಲಿ ಮಣಿಪಾಲದಲ್ಲಿ ೪೩ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಈ ಸಮ್ಮೇಳನ ಹಿಂದೆಂದೂ ನಡೆಯದ ಹೊಸ ದಾಖಲೆಯನ್ನು ಸೃಷ್ಟಿಸಿತು.

ಅ. ನ. ಕೃ. ನೋಡಲು ಸಾದಾ ವ್ಯಕ್ತಿ. ಬಿಳಿಯ ದಗಲೆ ಪೈಜಾಮು, ಉದ್ದನೆಯ ಅಂಗಿ. ಉಬ್ಬಿಸಿದ ಕ್ರಾಪು, ಕೈಯಲ್ಲಿ ಸಿಗರೇಟು, ಯಾವಾಗಲೂ ಕನ್ನಡದ ಚಿಂತೆ. ವ್ಯಾಪಕವಾದ ನೋಟ. ಹುಟ್ಟಿದಾಗಲೇ ಕನ್ನಡಿಗ.



# ಡಾ|| ಡಿ. ವಿ. ಗುಂಡಪ್ಪ

ಈಗ್ಗೆ ಸುಮಾರು ಎಂಟು ವರ್ಷಗಳ ಹಿಂದಿನ ಮಾತು. ಕನ್ನಡದ ಖ್ಯಾತ ಕವಿ, ಉದ್ದಾಮ ಪಂಡಿತ, ಧೀರ ರಾಜಕಾರಿಣಿ ಡಾ|| ಡಿ. ವಿ. ಗುಂಡಪ್ಪನವರನ್ನು ಕಾಣಲು ಬಸವನಗುಡಿಯಲ್ಲಿರುವ ಅವರ ಮನೆಗೆ ಹೋದೆ. ಅಷ್ಟರ ಒಳಗೆ ಅವರಿಗೂ ನನಗೂ ಹತ್ತಾರು ಪತ್ರವ್ಯವಹಾರಗಳು ನಡೆದಿದ್ದವು. ಇದಕ್ಕೂ ಒಮ್ಮೆ ಅದೇ ಮನೆಯಲ್ಲಿ ಕೇವಲ ಕೆಲವೇ ನಿಮಿಷ ಕಂಡು ಮಾತನಾಡಿದ್ದೆ. ಬೆಳಿಗ್ಗೆ ಸುಮಾರು ೧೦ ಘಂಟೆಯ ಸಮಯ ಡಿ.ವಿ.ಜಿ.ಯವರ ಮನೆಯ ಮೆಟ್ಟಿಲ ಹತ್ತಿದೆ ಬಾಗಿಲ ಒಳಗೆ ಆರಾಮ ಖುರ್ಚಿಯಲ್ಲಿ "ಪ್ರಜಾವಾಣಿ" ಪತ್ರಿಕೆಯನ್ನು ಓದುತ್ತ ಕುಳಿತಿದ್ದರು. ಪೂಜ್ಯರಿಗೆ ನಮಸ್ಕಾರ ಎಂದೆ, ಮೂಗಿನ ಮೇಲೆ ಕುಳಿತಿದ್ದ ಕನ್ನಡಕವನ್ನು ಕೈಗೆ ತೆಗೆದುಕೊಂಡು ಬನ್ನಿ ಎಂದರು. ಪಕ್ಕದಲ್ಲಿದ್ದ ಖುರ್ಚಿಯನ್ನ ತಮ್ಮ ಕಡೆಗೆ ಎಳೆದುಕೊಳ್ಳುತ್ತಾ ತಾವು ಭಟ್ಟರಲ್ಲವೆ ?

ಹೌದು.

ನನಗೆ ಕಣ್ಣು ಕಾಣುತ್ತಿಲ್ಲ, ಪರೆ ಬಂದಿದೆ. ಹಾಗಾಗಿ ಎಂತಹ ಹತ್ತಿರದವರನ್ನೂ ಗುರುತಿಸುವುದು ಕಷ್ಟ. ತಪ್ಪು ತಿಳಿಯಬೇಡಿ.

ಛೆ! ಎಲ್ಲಾದರೂ ಉಂಟೆ. ನಿಮ್ಮ ವಯಸ್ಸು, ನಿಮ್ಮ ಮನಸ್ಸು ನನಗೆ ಗೊತ್ತಿದೆ.

ಬಹು ದೂರದಿಂದ ಬಂದಿದ್ದೀರಿ. ಹೌದು, ನಿಮ್ಮನ್ನು ಕಾಣುವುದಕ್ಕಾಗಿ ಬಂದೆ.

ಸಂತೋಷ.

ಇತ್ತೀಚಿಗೆ ನಾನು ತಮಗೊಂದು ಪತ್ರ ಬರೆದಿದ್ದೆ. ಸಾಗರದಲ್ಲಿ ನಿಮ್ಮನ್ನು ಸನ್ಮಾನಿಸಲು ಅನುಮತಿ ಕೊಡಿ ಎಂದು. ಅದಕ್ಕೆ ನೀವು ಉತ್ತರ ಬರೆದು, ನನಗೆ ವಯಸ್ಸಾಗಿದೆ ಹೊರಗಡೆ ಎಲ್ಲಿಯೂ ಹೋಗುತ್ತಿಲ್ಲ. ನಿಮ್ಮಂತಹ ಸಹ ಹೃದಯರು, ನನ್ನನ್ನ ಸನ್ಮಾನಿಸಬೇಕೆಂದು ಯೋಚಿಸಿರುವುದರಿಂದಲೇ ನನಗೆ ಸನ್ಮಾನ ಮಾಡಿದಂತಾಯಿತು, ನಿಮಗೆ ಒಳ್ಳೆಯದಾಗಲಿ, ಎಂದು ಕಾಗದ ಬರೆದಿದ್ದೀರಿ. ಆದರಿಂದ ನನ್ನ ಮನಸ್ಸಿಗೆ ಸಮಾಧಾನವಾಗಲಿಲ್ಲ ತಮ್ಮನ್ನ ಒಪ್ಪಿಸಿ ಕೊಂಡು ಹೋಗಲು ಬಂದಿದ್ದೇನೆ, ತಾವು ಆಶೀರ್ವದಿಸಬೇಕು.

ಇದು ನನ್ನ ಮತ್ತು ಡಿ. ವಿ. ಜಿ.ಯವರ ನೇರವಾದ ಮಾತುಗಳು.

ಡಿ. ವಿ. ಜಿ. ಯವರು ಸ್ವಲ್ಪ ಹೊತ್ತು ಸುಮ್ಮನಾದರು. ನನ್ನಲ್ಲಿರುವ ತೀವ್ರತೆಯನ್ನು ಕಡಿಮೆ ಮಾಡಲು, ಬೆಂಗಳೂರು ಈಗ ಬಹಳ ಸೆಖೆ, ಹೊರಗಡೆ ಯಿಂದ ಬರುವ ಜನರೂ ವಿಪರೀತ ಎಂದರು.

ಹೌದು! ಕರ್ಣಾಟಕದ ರಾಜಧಾನಿ, ಕಲ್ಯಾಣನಗರ ಎಂದು ಹೆಸರಾಗಿದೆ. ಮತ್ತೆ ಮೌನ

ನಾನು ಪುನಃ ಪ್ರಾರಂಭಿಸಿದೆ. ಬೇಂದ್ರೆಯವರನ್ನ, ಕಾರಂತರನ್ನ, ವಿ. ಸೀ. ಯವರನ್ನ, ಮಾಸ್ತಿಯವರನ್ನ, ಕುವೆಂಪುರವರನ್ನ, ಗೋಕಾಕರನ್ನ ಸಾಗರಕ್ಕೆ ಕರೆಸಿ, ನಮ್ಮ ಪ್ರೀತಿ ಗೌರವವನ್ನ ಅರ್ಪಿಸಿದ್ದೇವೆ. ಇದರಿಂದ ನಾವು ಧನ್ಯರಾಗಿದ್ದೇವೆ. ಆದರೂ ಒಂದು ಕೊರತೆ ಎದ್ದು ಕಾಣುತ್ತಿದೆ ಅದೇ ತಮಗೆ ಗೌರವ ಅರ್ಪಿಸದಿರುವುದು.

ನನ್ನ ಕೈಯನ್ನು ಎಳೆದು ತಮ್ಮ ಹಸ್ತದಲ್ಲಿಟ್ಟು ಸವರುತ್ತಾ ಭಟ್ಟರೇ ನಿಮ್ಮ ಅಭಿಮಾನ ದೊಡ್ಡದು. ನಾನು ಅದನ್ನು ಅಲಕ್ಷಿಸುತ್ತಿಲ್ಲ ನನ್ನ ಆರೋಗ್ಯ ಏನೂ ಚೆನ್ನಾಗಿಲ್ಲ.

ತಾವು ದೊಡ್ಡ ಮನಸ್ಸು ಮಾಡಬೇಕು. ತಮ್ಮನ್ನ ಬೆಂಗಳೂರಿನಿಂದ ಕಾರಿನಲ್ಲಿ ಕರೆದುಕೊಂಡು ಹೋಗುತ್ತೇನೆ ಅಷ್ಟೇ ಜವಾಬ್ದಾರಿಯಿಂದ ಪುನಃ ತಂದು ಬಿಡುತ್ತೇನೆ. ಕಾರ್ಯಕ್ರಮಕ್ಕೆ ಇನ್ನು ಎರಡು ತಿಂಗಳು ಕಾಲಾವಕಾಶವಿದೆ.

ತಮ್ಮ ಕೈಯನ್ನ ನನ್ನ ತಲೆಯ ಮೇಲಿಟ್ಟು ಹೇಳಿದರು. ನಿಮ್ಮ ಸನ್ಮಾನಕ್ಕೆ ನನ್ನದೇ ಅಧ್ಯಕ್ಷತೆ ಆಗ ಬರುತ್ತೇನೆ.

ನನ್ನ ಮೈ ರೋಮಾಂಚನವಾಯಿತು. ಕಣ್ಣಿನಲ್ಲಿ ನೀರು ತುಂಬಿತು. ಡಿ.ವಿ. ಜಿ.ಯವರ ಕೈ ಮಾತ್ರ ನನ್ನ ತಲೆ ಸವರುತ್ತಿತ್ತು.

ನಾನೆಂದೆ ಅದು ಸಾಧ್ಯವಿಲ್ಲದ ಮಾತು.

ಯಾಕೆ ಸಾಧ್ಯವಿಲ್ಲ.

ಒಂದು ವೇಳೆ ನಾನು ಬಾರದಿರಬಹುದು.

ನಿಮ್ಮನ್ನ ಜನ ಸನ್ಮಾನಿಸುವುದಂತೂ ನಿಜ. ನಿಮ್ಮ ಹೃದಯ ದೊಡ್ಡದು.

ಡಿ. ವಿ. ಜಿ.ಯವರನ್ನ ಸಾಗರಕ್ಕೆ ಕರೆಸುವ ಅವಕಾಶ, ಯೋಗ ನನಗೆ ಲಭ್ಯವಾಗಿಲ್ಲ. ಆದರೆ ಅವರ ಹಿರಿಯ ಆಶೀರ್ವಾದ ನನಗೆ ದೊರಕಿತು. ಡಿ.ವಿ.ಜಿ. ಯುವರು ನಮ್ಮಿಂದ ಬಹು ದೂರ ಹೋದರು.

ಶ್ರೀ ಡಿ. ವಿ. ಗುಂಡಪ್ಪನವರು ಖ್ಯಾತ ವಿಖ್ಯಾತಲೇಖಕರು, ಉದ್ದಾಮ ಪಂಡಿತರು, ಅರ್ಥ ಶಾಸ್ತ್ರಜ್ಞರು, ರಾಜಕಾರಣಿಗಳು, ನೀತಿಬೋಧಕರು, ಪರಿಪಕ್ವವಾದ ಮನಸ್ಸು. ಅವರ "ಮಂಕುತಿಮ್ಮನ ಕಗ್ಗ" ನೂರು, ನೂರು, ಶತಮಾನಗಳಿಗೂ ನಿತ್ಯನೂತನ. ಒಂದು ವಾಕ್ಯಕ್ಕೆ ಹತ್ತು ಅರ್ಥಕೊಡುವ ಶಬ್ದಮಣಿ ದರ್ಪಣ. ಕನ್ನಡದಲ್ಲಿ ಐವತ್ತು ಸಹಸ್ರ ಪ್ರತಿಗಳು ಮಾರಾಟವಾದ ಮಹಾ ಕಾವ್ಯ. ಆರನೇ ಮುದ್ರಣವನ್ನು ಕಂಡ ಹೊತ್ತಿಗೆ, "ಉಮರನ ಒಸಗೆ"ಯಲ್ಲಿ ಕಂಡ ಪದ್ಯಗಳು, ಮಾಧುರ್ಯವನ್ನು, ಪ್ರೇಮವನ್ನು, ರಾಗವನ್ನು ಕೊಡಬಲ್ಲ ಅಮರಕೃತಿ. "ಸಾಹಿತ್ಯೋಪಾಸಕರು", "ಕಲೋಪಾಸಕರು", "ಸಾಹಿತ್ಯಶಕ್ತಿ" ಮುಂತಾದ ಕೃತಿಗಳು ಕನ್ನಡ ಕೃತಿಗಳ ಮೊದಲ ಪಂಕ್ತಿಯಲ್ಲಿ ಸೇರಬಲ್ಲ ನಿತ್ಯಪಾರಾಯಣದ ಗ್ರಂಥಗಳು. ವೈದಿಕ ಧರ್ಮದ ಮೇಲೂ, ಗೀತೆಯ ಮೇಲೂ ಬರೆದು ಜನ ಸಾಮಾನ್ಯರಿಗೆ ಎರಡೂ ವಿಷಯದ ಮೇಲೂ ತಾತ್ಪರ್ಯವನ್ನು ವಾಚಕರಿಗೆ ಸುಲಭ ಮಾಡಿಕೊಟ್ಟರು. ಡಿ. ವಿ. ಜಿ.ಯವರು ಸಾಹಿತಿಗಳು ಹೇಗೋ ಹಾಗೆ ಸಾಹಿತ್ಯ ಭಕ್ತರು. ಮನುಷ್ಯನ ಜೀವನದಲ್ಲಿ ಉಲ್ಲಾಸವನ್ನು ತುಂಬಿ ಸತ್ವವನ್ನು ಅಭಿವೃದ್ಧಿ ಪಡಿಸುವ ಶಕ್ತಿ ಸಾಹಿತ್ಯಕ್ಕೆ ಉಂಟೆಂಬ ಅವರ ನಂಬಿಕೆ. ಅದರಂತೆ "ಮಂಕುತಿಮ್ಮ"ನ ಕೃತಿಯುಲ್ಲಿ ಈ ಕೆಳಗಿನಂತೆ ಹೇಳಿರುವ ನಾಲ್ಕು ಪದ್ಯಗಳು ಎಷ್ಟೊಂದು ಮಾರ್ಮಿಕವಾಗಿದೆ.

೧

ಮನೆಯೊಳೋ ಮಠದೊಳೋ ಸಭೆಯೊಳೋ ಸಂತೆಯೊಳೊ |
ಕೊನೆಗೆ ಕಾಡೊಳೊ ಮಸಾಣದೊಳೊ ಮತ್ತೆಲ್ಲೋ ||
ಗಣನೆಗೇರಲಿಕೆಂದು ಜನತಪಿಸಿ ಕೊಳಲಹುದು |
ನೆನೆಯದಾತ್ಮದ ಸುಖವ ಮಂಕುತಿಮ್ಮ ||

೨

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು |
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ ||
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ |
ಎಲ್ಲರೊಳಗೊಂದಾಗು ಮಂಕುತಿಮ್ಮ ||

೩

ನಗುವು ಸಹಜದ ಧರ್ಮ; ನಗಿಸುವುದು ಪರಧರ್ಮ |
ನಗುವ ಕೇಳುತ ನಗುವುದತಿಶಯದ ಧರ್ಮ ||
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ |
ಮಿಗೆ ನೀನು ಬೇಡಿಕೊಳ್ಳೊ—ಮಂಕುತಿಮ್ಮ ||

೪

ಹೆಸರು ಹೆಸರೆಂಬುದೇಂ ? ಕಸುರುಬೀಸುವ ಗಾಳಿ |
ಹಸೆಯೊಂದು ನಿನಗೇಕೆ ಬ್ರಹ್ಮಪುರಿಯೊಳಗೆ ? ||
ಶಿಶುವಾಗು ನೀಂ ಮನದಿ ಹಸುವಾಗು, ಸಸಿಯಾಗು |
ಕಸಬರಿಕೆಯಾಗಿಳಿಗೆ—ಮಂಕುತಿಮ್ಮ ||

ಡಿ. ವಿ. ಜಿ.ಯವರಂತಹ ವ್ಯಕ್ತಿ ಆಗೊಮ್ಮೆ ಈಗೊಮ್ಮೆ ಭರತ ಖಂಡದಲ್ಲಿ ಕಾಣಿಸಿಕೊಳ್ಳಬಹುದು. ಎಲ್ಲರಿಗೂ ಸದಾ ಕಾಲವು ಕಾಣಿಸಿಕೊಳ್ಳಲು ಸಾಧ್ಯವಿಲ್ಲ. ಪರಿಪಕ್ವವಾದ ಜ್ಞಾನಗಂಗೆಯನ್ನ, ಪರಿಶುದ್ಧವಾದ ಆತ್ಮವನ್ನ, ಅಂತಃಕರಣದ ದೊಡ್ಡತನವನ್ನ ನಾನು, ಡಿ.ವಿ.ಜಿ.ಯವರಲ್ಲಿ ಕಂಡೆ. ಅವರಿಗಿಂತ ದೊಡ್ಡವರು ನನಗಿನ್ನೂ ಸಿಕ್ಕಿಲ್ಲ ಅವರು ಜೀವಿಸಿರುವ ನಾಡಿನಲ್ಲಿ ನಾವು ಬದುಕಿರುವುದು ಒಂದು ದೊಡ್ಡ ಅದೃಷ್ಟ.



# ಶ್ರೀ ಬಸವರಾಜ ಕಟ್ಟೀಮನಿ

ಬಸವರಾಜ ಕಟ್ಟೀಮನಿ, ಕನ್ನಡ ಸಾಹಿತ್ಯ ಲೋಕದಲ್ಲಿ ಅತ್ಯಂತ ಜನಪ್ರಿಯವಾದ ಹೆಸರು. ಈ ಹೆಸರಿನ ಸಂಗಡ, ಅವರ ಸಾಹಿತ್ಯವೂ ಕೂಡ ಅಷ್ಟೇ ಜನಪ್ರಿಯ. ಅವರ ಅದೃಷ್ಟವೂ ಅಷ್ಟೇ ಎತ್ತರ. ಕಷ್ಟ ಕಾರ್ಪಣ್ಯದಿಂದ ಬೆಂದ ಜೀವಕ್ಕೆ ಈಗ ಬಾಳಿನಲ್ಲಿ ಸ್ವಲ್ಪ ಸಮಾಧಾನ ಸಿಕ್ಕಿದೆ. ಸ್ನೇಹ– ದೊಡ್ಡವರು, ಚಿಕ್ಕವರು ಎಲ್ಲರಲ್ಲಿಯೂ ಒಂದೇ ಭಾವ. ಎಲ್ಲರೊಡನೆ ಬೆರೆಯುವ ಸಹೃದಯ, ಸತ್ಯಪ್ರಿಯತೆ, ಹಠ, ಸಾಹಸ, ಗುರಿಸಾಧನೆ ಇದು ಅವರ ಜೀವನದುದ್ದಕ್ಕೂ ನಡೆಸು ಬಂದ ದಾರಿ. ಈ ದಾರಿಯಲ್ಲಿಯೇ ಅವರು ಅರ್ಧ ಶತಮಾನವನ್ನು ಕಳೆದಿದ್ದಾರೆ. ಕಿವಿ ಮಂದವಾದರೂ, ಕಣ್ಣಿನ ನೋಟ ಬಹುದೂರ, ಏಳು ಸಮುದ್ರದಾಚೆಗೂ ಕಾಣುವ ಸೂಕ್ಷ್ಮದೃಷ್ಟಿ, ಹರಿತವಾದ ವಿಚಾರಪರತೆ, ಲೇಖನಿಯೂ ಅಷ್ಟೇ ಹರಿತ, ಅಷ್ಟೇ ತೀಕ್ಷ್ಣ.

ಬಸವರಾಜ ಕಟ್ಟೀಮನಿಯವರು ಕನ್ನಡದ ಅತ್ಯಂತ ಪ್ರಸಿದ್ಧ ಕಾದಂಬರಿಕಾರರಲ್ಲಿ ಒಬ್ಬರು. ಅವರ ಕಾದಂಬರಿಗಳು, ಕನ್ನಡ ಸಾಹಿತ್ಯದಲ್ಲಿ ತುಂಬಾ

ಅಗಾಧ ಪ್ರಭಾವವನ್ನು ಬೀರಿವೆ; ಕನ್ನಡ ಲೇಖಕರ ನಡುವೆ ಅವರಿಗೊಂದು ಅದ್ವಿತೀಯ ಸ್ಥಾನವನ್ನು ಕಲ್ಪಿಸಿಕೊಟ್ಟಿವೆ. ಅಕ್ಷರಶಃ ಅವರು ಜನತೆಯ ಲೇಖಕ. ಐವತ್ತು ವರ್ಷಗಳ ಹಿಂದೆ ರೈತ ಕುಟುಂಬದಲ್ಲಿ ಜನ್ಮತಾಳಿ, ಬೆಳಗಾವಿ ಮತ್ತು ಪೂನಾ ನಗರಗಳಲ್ಲಿ ವಿದ್ಯಾಭ್ಯಾಸ ಮಾಡಿದ ಕಟ್ಟೀಮನಿಯವರಿಗೆ, ಗ್ರಾಮೀಣ ಹಾಗೂ ನಗರ ಜೀವನಗಳೆರಡರ ಪರಿಚಯವೂ ಇದೆ. ಈ ಜೀವನಗಳ ಚಿತ್ರಗಳನ್ನು ವಾಸ್ತವಿಕವಾಗಿ, ಶಕ್ತಿಯುತವಾಗಿ ಅವರು ತಮ್ಮ ಸಾಹಿತ್ಯದಲ್ಲಿ ಪ್ರತಿಬಿಂಬಿಸಿದ್ದಾರೆ.

ಕಟ್ಟೀಮನಿಯವರು, ರಾಷ್ಟ್ರೀಯ ಚಳುವಳಿಯಲ್ಲಿ ಕಾಣಿಸಿಕೊಂಡವರು. ನಲವತ್ತೆರಡರ ಆಗಸ್ಟ್ ಚಳವಳಿ ಪ್ರಾರಂಭವಾದಾಗ ಅವರು ಅದರಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಜೈಲುವಾಸವನ್ನು ಅನುಭವಿಸಿದ ಅವರು, ಪ್ರಗತಿಶೀಲ ಸಾಹಿತ್ಯದ ಚಳವಳಿಯಿಂದ ವಿಶೇಷವಾಗಿ ಪ್ರಭಾವಿತರಾದರು. ಇಂದಿಗೂ ಸಹ ಸಾಮಾನ್ಯ ಜನರ, ಹೋರಾಟ– ಅವರ ಬದುಕು ಉಜ್ವಲವಾಗಬೇಕೆಂಬುದೇ ಅವರ ಆಸೆ. ಅವರ ಎಲ್ಲ ಕೃತಿಗಳಲ್ಲಿ ವಾಸ್ತವ ಚಿತ್ರಣವನ್ನೇ ಕಾಣಬಹುದು. ಆಗಸ್ಟ ಹೋರಾಟದಲ್ಲಿನ ತಮ್ಮ ಅನುಭವ, ಸಾಹಿತ್ಯಕ ಅಭಿವ್ಯಕ್ತಿಯೇ ಅವರ, "ಮಾಡಿ ಮಡಿದವರು." ಈ ಕಾದಂಬರಿಯ ಜನಪ್ರಿಯತೆಯನ್ನು ಅದರ ಎಂಟನೇ ಮುದ್ರಣವೇ ಸೂಚಿಸುತ್ತದೆ. ಈಗ ಚಲನಚಿತ್ರವಾಗಿದೆ.

ಪತ್ರಿಕೆಯ ಬರಹಗಳ ಮೂಲಕ ಬೆಳಕನ್ನು ಕಂಡ, ಕಟ್ಟೀಮನಿಯವರ ಒಲವು ಕತೆ, ಕಾದಂಬರಿಯತ್ತ ಹರಿಯಿತು. ಪತ್ರಿಕೋದ್ಯೋಗಿಯಾದರು. "ಸಂಯುಕ್ತ ಕರ್ನಾಟಕ" "ಪ್ರಜಾಮತ" ಪತ್ರಿಕೆಗಳಲ್ಲಿ ಕೆಲಸ, ಕರ್ನಾಟಕ ಬಂಧು, ಸ್ವತಂತ್ರ ಕರ್ನಾಟಕದಲ್ಲಿ ದುಡಿತ, "ಉಷಾ" ಪತ್ರಿಕೆಯ ಸಂಪಾದಕತ್ವ, ಪ್ರಗತಿಶೀಲ ಸಾಹಿತ್ಯದ ಚಳವಳಿ, ಅವರ ವಿಚಾರಧಾರೆ ಇದೆಲ್ಲದರ "ಸಿಹಿಕಹಿ" ಅನುಭವದಿಂದ ಹೊರಬಂದ ಸಾಹಿತ್ಯ ಅತಿ ಉನ್ನತ. "ಸ್ವಾತಂತ್ರ್ಯದೆಡೆಗೆ ನಡೆದಾಗ" "ಮಾಡಿ ಮಡಿದವರ"ನ್ನು ಕಂಡರು. "ಮೋಹದ ಬಲೆಯಲ್ಲಿ" ಸಿಲುಕಿ ಒದ್ದಾಡಿದ "ಜರತಾರಿ ಜಗದ್ಗುರು"ಗಳಿಗೆ ಭೂತಗನ್ನಡಿಯನ್ನು ಹಿಡಿದರು.

"ಬಂಗಾರದ ಜಿಂಕೆ ಮೇಲೆ" ಕುಳಿತು ಸವಾರಿ ಮಾಡಿದವರಿಗೆ, "ಜನಿವಾರ ಶಿವದಾರ"ದ ಕಡಿವಾಣ ಹಾಕಿ, "ಸಾಕ್ಷಾತ್ಕಾರ" ತೋರಿಸಿದರು. "ಮಣ್ಣು ಹೆಣ್ಣು ಹೊನ್ನು" ಇವು "ಬೀದಿಯಲ್ಲಿ ಬಿದ್ದಾಗ" "ನೀನನ್ನ ಮುಟ್ಟಬೇಡ" ಎಂದು ಎಚ್ಚರಿಸಿದರು. "ಸಮರಭೂಮಿ", "ಪೌರುಷಪರೀಕ್ಷೆ" ನಡೆದು "ಸುಂಟರಗಾಳಿ" ಎದ್ದಾಗ, "ಗಿರಿಯ ನವಿಲ"ಲ್ಲಿ ಕುಳಿತು, "ಜಲತರಂಗ" ಹಾಡಿದರು.

ಸ್ವಾತಂತ್ರ್ಯವಿಲ್ಲದೆ, "ಪಾತರಗಿತ್ತಿ"ಯರು "ಜ್ವಾಲಾ ಮುಖಿಯ ಮೇಲೆ" ಬಿದ್ದು ದಹಿಸುತ್ತಿರುವಾಗ "ಗ್ರಾಮಸೇವಕಿ"ಯರನ್ನು ಕರೆದು ಶಮನ ಮಾಡಿದರು. ಇವರ ಕೃತಿಗಳಲ್ಲಿ ಬಾಳಿನಲ್ಲಿ ಕಾಣುವ ನೆಚ್ಚನ್ನು, ಕೆಚ್ಚನ್ನು, ಕಾವನ್ನು ನಾವು ಗುರುತಿಸಬಹುದು.

ಬೆಳಗಾವಿ ಜಿಲ್ಲೆಯ ಗೋಕಾಕಿನಲ್ಲಿ ಹುಟ್ಟಿ, ತಾಯಿಯ ಊರಾದ ಮಲಾ ಮರಡಿಯಲ್ಲಿ ಬೆಳೆದು, ಬುದ್ಧಿ ಬೆಳೆದು ಕಾಲು ಬಲಿತಾಗ, ಊರೂರು ತಿರುಗಿ, ಪುಸ್ತಕವನ್ನು ಸಂಗಾತಿಯನ್ನಾಗಿ ಮಾಡಿಕೊಂಡು, ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಪ್ರಭುತ್ವವನ್ನು ಸಂಪಾದಿಸಿಕೊಂಡು, ಕನ್ನಡದ ಧೀಮಂತ ಸಾಹಿತ್ಯ ಕ್ಷೇತ್ರದಲ್ಲಿ ಕಟ್ಟೀಮನಿಯವರ ಜೀವನ, ಸಾಹಸದ್ದೂ, ಧೀರತನದ್ದೂ ಆಗಿದೆ. ತಮ್ಮ ಐವತ್ತು ವರ್ಷದ ಜೀವನದಲ್ಲಿ ಐವತ್ತು ಕೃತಿಗಳನ್ನು ರಚಿಸಿದ್ದಾರೆ, "ಸ್ವಾತಂತ್ರ್ಯದೆಡೆಗೆ", "ಮಾಡಿಮಡಿದವರು", "ಜ್ವಾಲಾ ಮುಖಿಯ ಮೇಲೆ" ಮುಂತಾದ ಕೃತಿಗಳು, ದೇಶದ ಎಲ್ಲ ಭಾಷೆಗಳಲ್ಲಿಯೂ ಭಾಷಾಂತರಗೊಳ್ಳಲು ಯೋಗ್ಯವಾಗಿವೆ. ಇವರ ಸೂಕ್ಷ್ಮ ಸಂವೇದನೆ, ಕಲಾಭಿಜ್ಞತೆ, ವಾಸ್ತವ ನಿರೂಪಣೆ, ಸಮಾಜದ ವಿಮರ್ಶೆ, ಸರಳ ಸುಂದರ ಶೈಲಿ ಇವಕ್ಕೆ ಕಾರಣವಾಗಿದೆ.

"ಜ್ವಾಲಾ ಮುಖಿಯ ಮೇಲೆ" ಕಾದಂಬರಿಗೆ, ಸೋವಿಯೆತ್ ದೇಶದ ನೆಹರೂ ಪುರಸ್ಕಾರ. ಇದಕ್ಕೆ ಕಟ್ಟೀಮನಿಯವರಿಗೆ, ಎಂಟು ಸಹಸ್ರ ರೂಪಾಯಿ ಕೊಡುಗೆ, ಹದಿನೈದು ದಿನಗಳ ಸೋವಿಯೆತ್ ದೇಶದ ಉಚಿತ ಪ್ರವಾಸ, ಕೀರ್ತಿಯ ಗೋಪುರ! ಕರ್ನಾಟಕದಲ್ಲಿ ಗೌರವ. ಹುಬ್ಬಳ್ಳಿ, ಧಾರವಾಡ, ಬೆಂಗಳೂರು, ಸಾಗರ ಈ ನಗರಗಳಲ್ಲಿ ಬೃಹತ್ ಪ್ರಮಾಣದಲ್ಲಿ ಸನ್ಮಾನ. ಇದರಿಂದ ಕಟ್ಟೀಮನಿಯವರಿಗೆ, ಹೊಸ ಹುರುಪು, ಹೊಸ ಚೇತನ. ಸೋವಿಯೆತ್ ದೇಶದಲ್ಲಿ ಪ್ರವಾಸ, ಅಲ್ಲಿಯ ಜನಜೀವನದ ಅರಿವು. ಸಾಹಿತ್ಯ, ಸಂಸ್ಕೃತಿಯ ಹೊಸ ಪ್ರಜ್ಞೆ, ಹೊಸ ಬೆಳಕು, ಇದರಿಂದ ಹೊಸ ಸಾಹಿತ್ಯದ ಸೃಷ್ಟಿ.

ಕಟ್ಟೀಮನಿಯವರ ಧೀಮಂತ ಸಾಹಿತ್ಯ, ರಾಜಕೀಯ ಪ್ರಜ್ಞೆ, ನಿಷ್ಠುರ ಬರವಣಿಗೆ-ಇವರಿಂದ ಮೈಸೂರು ರಾಜ್ಯದ ವಿಧಾನ ಪರಿಷತ್ತಿಗೆ ನಾಮಕರಣ, ರಾಜಕೀಯ ರಂಗದ ಒಳಹೊರನೋಟ, ಕಾನೂನಿನ ರಚನೆ, ಕಾನೂನಿನ ಪಾಲನೆ, ಪ್ರೋಲೀಸರ ಮಗನಾಗಿ ಹುಟ್ಟಿರುವುದಕ್ಕೆ ಸಾಕ್ಷಿ. ಬರೆಹವೇ ಜೀವನವೆಂದಾಗ ಅಂಜದೆ, ಅಳುಕದೆ, ಅವರ ಸಾಧನೆಯ ಸಿದ್ಧಿಯನ್ನು ಪಡೆದ ಮಹಾಜಟ್ಟಿ. ಕಟ್ಟೀಮನಿಯವರ ಸಾಹಿತ್ಯ ನಿತ್ಯನವೀನ.





# ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್

ಬೆಂಗಳೂರಿನ ಗಾಂಧೀಬಜಾರಿನ ರಸ್ತೆಯಲ್ಲಿ ಸಂಜೆ ೫ ಘಂಟೆಗೆ ಸರಿಯಾಗಿ ಗವೀಪುರ ಕಡೆಯಿಂದ ಬರುವ ದಾರಿಯಲ್ಲಿ ನಿಂತರೆ ಖ್ಯಾತ ಕವಿ ಮಾಸ್ತಿಯವರು ಸಿಗುತ್ತಾರೆ ಎಂಬ ಪ್ರತೀತಿ ನಾಳೆ ಸೂರ್ಯ ಹುಟ್ಟುವಷ್ಟೇ ಸತ್ಯವಾದದ್ದು. ಕೋಟು, ಕಚ್ಚೆಪಂಚೆ, ಕಪ್ಪುಟೋಪಿ, ಹಣೆಯಲ್ಲಿ ನಾಮ, ಕೈಯಲ್ಲಿ ಛತ್ರಿ, ಕಾಲಲ್ಲಿ ತೆಳುವಾದ ನಾಜೂಕಾದ ಚಪ್ಪಲಿ, ಇದು ಮಾಸ್ತಿಯವರ ನಿತ್ಯಜೀವನದಲ್ಲಿರುವ ಉಡುಪು. ಬಿಸಿಲಾಗಲಿ, ಮಳೆ ಬರಲಿ, ಬಾರದಿರಲಿ, ತಣ್ಣನೆಯ ಹವೆ ಇದ್ದರೂ ಪರವಾಗಿಲ್ಲ ಮಾಸ್ತಿಯವರ ಕೈಯಲ್ಲಿ ಛತ್ರಿ ಇರಲೇಬೇಕು, ಅದು ತಲೆಗೆ ರಕ್ಷೆಯಾಗಲೇಬೇಕು. ಗಾಂಧೀಬಜಾರ್ ರಸ್ತೆಯ ಮರದ ಮೇಲೆ ಸಂಜೆ ೫ ಘಂಟೆಗೆ ಕಾಗೆಗಳೂ ಇತರೆ ಹಕ್ಕಿಗಳು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸೇರುತ್ತವೆ. ಕಿವಿಚುಚ್ಚುವಷ್ಟು ಕರ್ಕಶ, ಇವರ ಹಿಕ್ಕೆ ಮಾಸ್ತಿಯವರ ತಲೆಮೇಲೆ ಬೀಳದಿರಲೆಂದು ಛತ್ರಿ ಇದ್ದರೂ ಇರಬಹುದು. ಅಂತೂ ಛತ್ರಿ ಮಾಸ್ತಿಯವರ ಜೀವನದ ಸಂಗಾತಿ.

ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮನಸ್ಸು ಬಹಳ ವಿಶಾಲ, ಅದು ಭಾರತವಷ್ಟೇ ವಿಶಾಲ. ಸರಳತೆ, ಸಜ್ಜನಿಕೆ, ನಯ, ವಿನಯ, ಸಂಸ್ಕೃತಿ, ಹೃದಯವಂತಿಕೆ, ಇವೆಲ್ಲವೂ ಒಂದೇ ವ್ಯಕ್ತಿಯಲ್ಲಿ ನೋಡಲು, ಅನುಭವಿಸಲು ಸಿಗಬಹುದಾದ ವಸ್ತು. ಮಾಸ್ತಿಯವರಷ್ಟು ನಯವಾಗಿ ಮಾತನಾಡಲು ಬರುತ್ತದೆಯೆ ಎಂದು ಯಾರನ್ನಾದರೂ ಕೇಳಿದರೆ ಅದು ಸಾಧ್ಯವಿಲ್ಲವೆಂಬ ಉತ್ತರವೇ ಬರಬಹುದು.

ಸಣ್ಣ ಕತೆಯು ಶ್ರೀನಿವಾಸರು "ಚನ್ನಬಸವ ನಾಯಕ"ದಂತಹ ಕಾದಂಬರಿಯನ್ನು ಬರೆದರು. ಗೀತನಾಟಕ, ನಾಟಕ, ವಿಮರ್ಶೆ, ಇದೆಲ್ಲವೂ ಮಾಸ್ತಿಯವರಿಂದ ನಡೆಯಿತು.

ಮಾಸ್ತಿಯವರು ಸಾಹಿತಿ ಮಾತ್ರವಲ್ಲ, ಒಬ್ಬ ದಕ್ಷ ಅಧಿಕಾರಿ ಕೂಡ ಆಗಿದ್ದರು. ಆ ಕಾಲದಲ್ಲಿ ಹಳ್ಳಿಯ ಜನರ ಪರಿಚಯ, ಅವಿದ್ಯಾವಂತರ ದಾರುಣ ಸ್ಥಿತಿ, ಅವರ ದಡ್ಡತನವನ್ನು ವಿದ್ಯಾವಂತರು ದುರುಪಯೋಗ ಪಡಿಸಿಕೊಳ್ಳುವ ವಿಧಾನ ಎಲ್ಲವೂ ಅರ್ಥವಾಯಿತು. ಇಂಗ್ಲೀಷಿನ ಗಂಧವೇ ಗೊತ್ತಿಲ್ಲದ ಆ ಕಾಲದಲ್ಲಿ ಹಳ್ಳಿಯ ಮುಗ್ಧ ಜನರಿಗಾಗುತ್ತಿರುವ ವಂಚನೆ, ಮೋಸ, ಇದೆಲ್ಲವೂ ಮಾಸ್ತಿಯವರಿಗೆ ತಿಳಿಯಿತು, ಸಾಹಿತ್ಯದಲ್ಲಿ ಅದೆಲ್ಲವೂ ಕ್ರಮೇಣ ಮೂಡಿಬಂತು.

ಮಾಸ್ತಿಯವರಿಗೆ ಮಲೆನಾಡಿನಲ್ಲಿ ಕೆಲಸ, ಪಶ್ಚಿಮ ವಾಹಿನಿಯಲ್ಲಿ ಮದುವೆ. ದೇವರಲ್ಲಿ ನಂಬಿಕೆ, ನಂಬಿದ ದೇವರಲ್ಲಿ ತೃಪ್ತಿ. ಅನೇಕಸಲ ದೈವ ಪರೀಕ್ಷೆಯಲ್ಲಿ ತೇರ್ಗಡೆ. ಜೀವನದ ಉದ್ದಕ್ಕೂ ರಾಮಾಯಣದ ಪಾರಾಯಣ. ಇಡೀ ರಾಮಾಯಣವೇ ಕಂಠಪಾಠ. ಆಗಡಿ ಸಾಧುಗಳ ಅನುಗ್ರಹ. ರಾಮಾನುಜಾಚಾರ್ಯರ ದರ್ಶನ. ತಿರುಪತಿಯ ತಿಮ್ಮಪ್ಪ, ನಂಜನಗೂಡಿನ ನಂಜುಂಡೇಶ್ವರನ ಅಭಯ ಹಸ್ತ. ದೈವ ಉಂಟು, ದೇವರುಂಟು, ಎಂಬ ಸಿದ್ಧಾಂತ. ಜೀವನ ಕುಗ್ಗಿದಾಗ, ಹಿಗ್ಗಿದಾಗ, ಒಂದೇ ಭಾವ ಒಂದೇ ದೃಷ್ಟಿ.

ಕನ್ನಡ ಸಾಹಿತ್ಯ ಪರಿಷತ್ತಿಗೂ, ಮಾಸ್ತಿಯವರಿಗೂ ಕಳೆದ ಐವತ್ತು ವರ್ಷಗಳ ಸಂಬಂಧ. ಸಣ್ಣ ಕಾರ್ಯಕ್ರಮವೇ ಇರಲಿ, ದೊಡ್ಡ ಕಾರ್ಯಕ್ರಮವೇ ಇರಲಿ ಮಾಸ್ತಿಯವರು ಬಾರದಿದ್ದರೆ ಆ ಕಾರ್ಯಕ್ರಮ ಸಪ್ಪೆ. ಚಂದ ಕಾಣುವುದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಐದು ವರ್ಷಗಳ ಕಾಲ ಕೆಲಸ ಮಾಡಿದರು. ತಮ್ಮ ಬಹುಪಾಲು ಸಮಯವನ್ನ ಇದಕ್ಕಾಗಿ ಮೀಸಲಿಟ್ಟರು. ನಾಡಿನ ಉದ್ದಗಲಕ್ಕೂ ತಿರುಗಿದರು. ಜನರ ಆತಿಥ್ಯವನ್ನು ಸ್ವೀಕರಿಸಿದರು, ಗೌರವವನ್ನು ಪಡೆದರು. ಮಾಸ್ತಿಯವರು ಹೋದಲ್ಲೆಲ್ಲಾ ಅನ್ನಸಂತರ್ಪಣೆ, ಪಾನಕ, ಕೋಸುಂಬರಿ, ದಿನವೂ ಕೃಷ್ಣ ಜನ್ಮಾಷ್ಟಮಿ.

ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರಿಗೆ ಈಗ ಎಂಬತ್ತಾರು ವರ್ಷ ತುಂಬಿದೆ. ಐವತ್ತು ವರ್ಷದ ಪ್ರಾಯದಲ್ಲಿ ಮಾಸ್ತಿಯವರು ಜೀವನದಲ್ಲಿ ಏನೆಲ್ಲಾ ಚಟುವಟಿಕೆಯನ್ನು ಮಾಡುತ್ತಿದ್ದರೋ ಅದನ್ನೆಲ್ಲಾ ಈಗಲೂ ಮಾಡುತ್ತಿದ್ದಾರೆ.

ಈಗಲೂ ಪ್ರತಿದಿನ ಸಂಜೆ ಗಾಂಧೀಬಜಾರಿನ ಕ್ಲಬ್ಬಿಗೆ ಹೋಗಲೇಬೇಕು. ಅಲ್ಲಿ ಒಂದು ಘಂಟೆ ಮಿತ್ರರೊಡನೆ ಹರಟೆ ಹೊಡೆಯಬೇಕು, ನಗಿಸಬೇಕು, ತೃಪ್ತಿ ಪಡಬೇಕು ಆಗ ಅಂದು ಮನಸ್ಸಿಗೆ ಸಮಾಧಾನ.

ಸಣ್ಣಕತೆಗಳ ಕಾವ್ಯನಾಮ "ಶ್ರೀನಿವಾಸ" ನಾಮಾಂಕಿತದಿಂದ ಪ್ರಸಿದ್ಧಿ ಪಡೆದ ಡಾ|| ಮಾಸ್ತಿವೆಂಕಟೇಶ ಅಯ್ಯಂಗಾರ್‌ರವರಿಗೆ ಡಾ|| ದ. ರಾ. ಬೇಂದ್ರೆ ಹಾಗೂ ದಿವಂಗತ ಟಿ. ಪಿ. ಕೈಲಾಸಂರವರು ಆತ್ಮೀಯ ಸ್ನೇಹಿತರು. ಜಿಲ್ಲಾಧಿಕಾರಿಯಾಗಿದ್ದಾಗ ಮಾಸ್ತಿಯವರು, ಕೈಲಾಸಂ ನಾಟಕವನ್ನು ತಾವಿರುವ ಎಲ್ಲಾ ಜಿಲ್ಲೆಯಲ್ಲಿಯೂ ಆಡಿಸಿ, ಕೈಲಾಸಂರವರ ನಾಟಕ ಜನಪ್ರಿಯತೆ ಗೊಳಿಸಲು ಮಾಸ್ತಿಯವರ ಕೊಡುಗೆ ಹೆಚ್ಚಿನದು. ಡಾ|| ದ. ರಾ. ಬೇಂದ್ರೆ ಮಾಸ್ತಿಯವರನ್ನ ಹಲವು ಜನರು ಈಗಲೂ ಅಣ್ಣ–ತಮ್ಮ ಎಂದೇ ಕರೆಯುತ್ತಾರೆ. ಅವರಿಬ್ಬರಲ್ಲಿ ಆತ್ಮೀಯತೆ ಅಷ್ಟೊಂದು ಬೆಳೆದಿದೆ. ಮಾಸ್ತಿಯವರು ತಾವೂ ಬೆಳೆಯಬೇಕು, ಇತರೆಯವರೂ ಬೆಳೆಯಬೇಕು ಎನ್ನುವವರು. ಅವರ ಹೃದಯ ವೈಶಾಲ್ಯ ಬಹು ದೊಡ್ಡದು. ಅದು ಹಿಮಾಲಯದಷ್ಟು ಎತ್ತರ, ಸಮುದ್ರದಷ್ಟು ಆಳ.

೧೯೧೦ ರಲ್ಲಿ "ರಂಗನ ಮದುವೆ" ಎಂಬ ಸಣ್ಣ ಕಥಾಸಂಕಲನದಿಂದ ಪ್ರಾರಂಭವಾದ ಬರವಣಿಗೆ ೧೯೭೩ ರಲ್ಲಿ "ಶ್ರೀ ರಾಮಪಟ್ಟಾಭಿಷೇಕ"ದ ತನಕ ೯೮ ಪುಸ್ತಕಗಳು ಹೊರಬಂದಿವೆ. ಇದರಲ್ಲಿ ಸಣ್ಣಕತೆ, ನಾಟಕ, ಕಾವ್ಯ, ಕಾದಂಬರಿ, ಪ್ರಬಂಧ, ವಿಮರ್ಶೆ, ಜೀವನಚರಿತ್ರೆ, ಕನ್ನಡ ಹಾಗೂ ಇಂಗ್ಲೀಷ್ ಬರಹಗಳು ಸೇರಿವೆ. ಇದರಲ್ಲಿ "ಕೆಲವು ಸಣ್ಣಕತೆಗಳು" ಎನ್ನುವ ಸಂಕಲನ ಎಂಟು ಮುದ್ರಣವನ್ನು ಕಂಡಿದೆ. "ಸುಬ್ಬಣ್ಣ" ಎಂಬ ನೀಳ್ಗತೆ ೧೩ ನೇ ಮುದ್ರಣವನ್ನು ಕಂಡಿದೆ. "ತಾವರೆ", "ಬಿನ್ನಹ", "ಅರುಣ", "ಚೆಲುವು" ಕಾವ್ಯ ಸಂಕಲನಗಳು ನಿತ್ಯ ನೂತನ, ಅತ್ಯಂತ ಜನಪ್ರಿಯತೆ ಗಳಿಸಿದ ಪುಸ್ತಕಗಳು. "ಯಶೋಧರ" "ಕಾಕನಕೋಟೆ" "ಸಾವಿತ್ರಿ" ನಾಟಕಗಳು, "ಚೆನ್ನಬಸವ ನಾಯಕ" ಕಾದಂಬರಿಯೂ, ಮಾಸ್ತಿಯವರ ಹೆಸರನ್ನು ಶಾಶ್ವತವಾಗಿ ಉಳಿಸಿದವು. ಮಾಸ್ತಿಯವರ ಸಾವಿರ, ಸಾವಿರ ಪುಟಗಳ ಸಾಹಿತ್ಯಗಳನ್ನ ಯಾವ ಅಳತೆ ಗೋಲಿನಿಂದ ಅಳೆಯಲು ಸಾಧ್ಯವಿಲ್ಲವೆಂಬ ಮಾತು ಅಕ್ಷರಶಃ ಸತ್ಯ.

ಅರ್ಧ ಶತಮಾನಕ್ಕೂ ಮಿಕ್ಕಿ ಕನ್ನಡ ಸಾಹಿತ್ಯಕ್ಕೆ ಕರ್ಣಾಟಕಕ್ಕೆ ಅನನ್ಯ ಭಕ್ತಿಯಿಂದ ಸೇವೆ ಸಲ್ಲಿಸುತ್ತಾ ಬಂದ ಡಾ|| ಮಾಸ್ತಿ ವೆಂಕಟೇಶಯ್ಯಂಗಾರ್‌ರಂತ ವ್ಯಕ್ತಿಗಳನ್ನ ಈ ನಾಡು ಪಡೆದು ಧನ್ಯವಾಗಿದೆ.

"ಜೀವನ" ಮಾಸಪತ್ರಿಕೆಯನ್ನ ೧೯೩೯ ರಲ್ಲಿ ಧಾರವಾಡದಲ್ಲಿ ಬೇಂದ್ರೆಯವರು ಪ್ರಾರಂಭಿಸಿದರು. ಸುಮಾರು ಐದು ವರ್ಷಗಳ ಕಾಲ ನಡೆಸಿದರು. ಅಷ್ಟರಲ್ಲಿ ಸರ್ಕಾರದ ಕೆಲಸದಿಂದ ನಿವೃತ್ತರಾದ ಮಾಸ್ತಿಯವರು ಅದನ್ನ ವಹಿಸಿಕೊಂಡು ಬೆಂಗಳೂರಿನಿಂದ ಹೊರಡಿಸಿದರು. ಮೂವತ್ತೈದು ವರ್ಷಕಾಲ ಸತತವಾಗಿ "ಜೀವನ" ಪತ್ರಿಕೆಯನ್ನ ನಡೆಸಿದರು. ಎಂತಹ ಕೆಲಸವಿರಲಿ ಏನೇ ಇರಲಿ ೧ ನೇ ತಾರೀಖು ವಾಚಕರ ಕೈ ಸೇರಲೇಬೇಕು. ಅಷ್ಟೊಂದು ಕಾಲವನ್ನ ಗೊತ್ತು ಮಾಡಿಕೊಂಡವರು ಪತ್ರಿಕೋದ್ಯಮದಲ್ಲಿ ಬಹಳ ವಿರಳ. ಅದರಲ್ಲಿರುವ ಸಂಪಾದಕೀಯವೇ ಇಡೀ ಪತ್ರಿಕೆಯ ಜೀವಾಳ. ಅದೊಂದು ಜ್ಞಾನಗಂಗೆ. ವಿಶ್ವದ ಹಲವು ವಿಷಯಗಳನ್ನು ಕುರಿತು ಬರೆಯುತ್ತಿದ್ದರು.

ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಬಗ್ಗೆ ಹೇಳಬೇಕಾದ್ದು ಬಹಳ, ತಿಳಿಯಬೇಕಾದ್ದು ಬಹಳ. ಇಲ್ಲಿ ಹೇಳಿರುವುದು ಸ್ವಲ್ಪ.



# ಶ್ರೀ ದೇ. ಜವರೇಗೌಡರು

ಅಧಿಕಾರವೆಂಬುದು ಕೇವಲ ಪ್ರಯತ್ನದಿಂದಲೇ ಸಿಗಬಹುದಾದ ವಸ್ತುವಲ್ಲ, ಅದಕ್ಕೆ ದೈವಸಂಕಲ್ಪವೂ ಕೂಡಿ ಬರಬೇಕು. ಅಧಿಕಾರ ಬಯಸುವ ವ್ಯಕ್ತಿಯಲ್ಲಿ ಒಂದು ವಿಶೇಷ ಗುಣವಾದರೂ ಇರಬೇಕು. ಜನರು ಅಧಿಕಾರಕ್ಕಾಗಿ ಏನೆಲ್ಲವನ್ನೂ ಮಾಡುತ್ತಾರೆ. ಅದರೂ ಅಧಿಕಾರ ಸಿಗದೆ ನಿರಾಶರಾಗಿ, ಮತ್ತೆ ಮತ್ತೆ ಅದಕ್ಕಾಗಿ ತಮ್ಮ ಸಾರ್ಥಕ ಜೀವನವನ್ನು ನಿರರ್ಥಕ ಮಾಡಿಕೊಂಡವರು, ಈ ಪ್ರಪಂಚದಲ್ಲಿ ಬಹಳಷ್ಟು ಮಂದಿ. ಕೆಲವರು ಅಧಿಕಾರದ ಬೆನ್ನು ಹತ್ತಿ ಹೋಗುತ್ತಾರೆ; ಇನ್ನು ಕೆಲವರಿಗೆ, ಅಧಿಕಾರವೇ ಅವರನ್ನು ಬೆನ್ನು ಹತ್ತುತ್ತದೆ.

ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ನೇಮಕಗೊಂಡಿದ್ದ ದೇ. ಜವರೇಗೌಡರು ಎರಡನೇ ವರ್ಗಕ್ಕೆ ಸೇರಿದವರು. ಅವರ ಈ ನೇಮಕ ವಾಸ್ತವವಾಗಿ ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಈತನಕ ಸಲ್ಲಿಸಿದ ಸೇವೆ, ನುಡಿ ಸೇವೆ, ನಾಡ ಸೇವೆಗಾಗಿ ದೊರೆತ ಗೌರವವಾಗಿದೆ. ಈ ನೇಮಕ ಅಷ್ಟೇ ಆಶ್ಚರ್ಯವಾಗಿದೆ; ಸದ್ದು ಗದ್ದಲವಿಲ್ಲದೆ ಇವರ ಹೆಸರನ್ನು ಸರ್ಕಾರ ಗುರುತಿಸಿದೆ.

ದೇ. ಜವರೇಗೌಡರದು ಸುಸಂಸ್ಕೃತ ಮನೆತನ. ಚಿಕ್ಕಂದಿನಲ್ಲಿ ಗೋವುಗಳನ್ನು, ಕುರಿಗಳನ್ನು ಕಾದ 'ಗೋಪಾಲಕೃಷ್ಣ'.

ಚನ್ನಪಟ್ಟಣ ತಾಲ್ಲೂಕಿನ ಚಕ್ಕರೆ ಇವರು ಜನಿಸಿದ ಊರು. ತಂದೆ ದೇವೆಗೌಡರು, ಕನ್ನಡವೇ ನನ್ನ ತಾಯಿ—ತಂದೆ ಎಂದು ನಂಬಿದ ಕನ್ನಡದ ಕುಲ ಪುತ್ರ. ಕನ್ನಡಕ್ಕೆ ಅವಮಾನದ ಪ್ರಸಂಗ ಬಂದಾಗಲೆಲ್ಲಾ ಎದ್ದೇಳು ಕನ್ನಡದ ವೀರ, ಎಂದು ಭೋರ್ಗರೆದ ಚಕ್ರಧಾರಿ.

ಜವರೇಗೌಡರು ಸದಾ ಹಸನ್ಮುಖಿ. ಮಿತ್ರರನ್ನು ಕಂಡರೆ ಹೆಗಲ ಮೇಲೆ ಕೈಯಿರಿಸಿ, ಕುಶಲ ವಾರ್ತೆ ಕೇಳುವ ಕುಶಲಮತಿ ದುಂಡುದೇಹದ ನಗುಮುಖದ ಮಾತುಗಾರ. ಒಮ್ಮೆ ಪರಿಚಯವಾದ ವ್ಯಕ್ತಿ, ಸಾವಿರ ವರುಷವಾದರೂ ಅಷ್ಟೆ, ಗುರುತಿಸುವುದು ಬಲು ಸುಲಭ. ನಿರಹಂಕಾರಿ ಸೌಮ್ಯ ಪುರುಷ, ನಡೆ ನುಡಿ ಎಲ್ಲವೂ ಸಹಜ. ನಿತ್ಯ ಜೀವನದಲ್ಲಿ ಸದಾ ಚುರುಕು. ಬಿಡುವಾದಾಗಲೆಲ್ಲ ಸಿಕ್ಕಿದ ಗೆಳೆಯರೊಡನೆ ಪರಸ್ಪರ ಕಥಾ ಕಾಲಕ್ಷೇಪ.

ತಂದೆ ಓದುಬಾರದ, ಆದರೆ ಸುಸಂಸ್ಕೃತ ರೈತ. ಮಗ ಚಿಕ್ಕಂದಿನಲ್ಲಿ ಓದುವುದನ್ನು ಕಂಡು ಹಲವು ಸಲ, ತಮ್ಮ ಕೆಲಸಕ್ಕೆ ಅನಾನುಕೂಲವಾದಾಗಲೆಲ್ಲ ಮಗನ ಮೇಲೆ ರೇಗಿದ್ದೂ ಉಂಟು. ಓದು ಬಿಡಿಸಿ ಜವರೇಗೌಡರನ್ನು, ಮನೆಗೆಲಸಕ್ಕೆ ಸದಾ ನೇಮಿಸಿಕೊಂಡು, ಕುರಿ ಹಾಗೂ ಹಸುಗಳನ್ನು ಕಾಯಿಸಬೇಕೆಂದು, ವ್ಯವಸಾಯ ಮತ್ತು ಪಶುಪಾಲನೆ ಖಾತೆಯನ್ನು ವಹಿಸಬೇಕೆಂದು ತಂದೆಯ ಹಂಬಲ. ಅದಕ್ಕೆ ವಿರುದ್ಧವಾಗಿ ಮಗನ ಹೋರಾಟ. ಊರಿನ ಶಾನುಭೋಗರ ಕಾಟ. ಅವರ ಸರ್ವಾಧಿಕಾರತ್ವವನ್ನು ನೀಗಿಸಲು ಸತತ ಹೋರಾಟ! ಹಳ್ಳಿಯ ಈ ರೈತನ ಮಗ, ವಿದ್ಯೆ ಕಲಿಯುತ್ತಾನಂತೆ ಎಂಬ ಗೇಲಿ.

ಏನೆಲ್ಲ ಕಷ್ಟಗಳನ್ನೂ ಸಹಿಸಿ ಊರಿನ ವಿದ್ಯಾಭ್ಯಾಸ ಮುಗಿಸಿ ಚನ್ನಪಟ್ಟಣ ಪ್ರವೇಶ. ಅಲ್ಲಿ ಮುಂದಿನ ವಿದ್ಯಾಭ್ಯಾಸ. ಹಣಕ್ಕಾಗಿ ಪರದಾಟ, ಓದಿಗಾಗಿ ಸೆಣಸಾಟ. ಅಂತೂ, ಕಷ್ಟಗಳ ಮಹಾಸಮುದ್ರದಲ್ಲಿ ಈಜಿ, ಎಂ ಎ. ಪದವಿ ಗಿಟ್ಟಿಸಿದ ಸಾಹಸಿ. ಪಾಸಾದೊಡನೆಯೇ ಕೆಲವು ಕಾಲ ಸರ್ಕಾರದ ನೌಕರಿ.

ದೇ. ಜವರೇಗೌಡರಿಗೆ ಕನ್ನಡದ ಮಹಾ ಪ್ರಾಣದಲ್ಲಿ ಮೊದಲ ಗುರು 'ಕುವೆಂಪು.' ಅವರನ್ನು ಕಾಣುವ ಮೊದಲು, ಅವರ ಭಾವಚಿತ್ರ ನೋಡಿ ಏನೆಲ್ಲ ಕಲ್ಪನೆಯನ್ನು ಮಾಡಿಕೊಂಡಿದ್ದರೋ ಪ್ರತ್ಯಕ್ಷ ದರ್ಶನವಾದಾಗಲೂ ಅದೇ ಭಾವನೆ; ಅದೇ ನಂಬಿಕೆ.

ತಳುಕಿನ ವೆಂಕಣ್ಣಯ್ಯ, ತೀ. ನಂ. ಶ್ರೀ, ಕೃಷ್ಣ ಶಾಸ್ತ್ರಿಗಳು ಕೂಡ, ದೇಜಗೌರವರ ಗುರುವಿನ ಸಾಲಿನಲ್ಲಿ ನಿಂತವರು.

ಕನ್ನಡದ ಮಹಾಮಂತ್ರವನ್ನು ಬೋಧಿಸಿದ ಕುವೆಂಪು, ದೇಜಗೌರವರ ಭದ್ರ ರಕ್ಷೆ; ಕನ್ನಡ ಕಲ್ಪವೃಕ್ಷ. ಗುರು ಕುವೆಂಪುರವರಿಗೂ, ಶಿಷ್ಯ ದೇಜಗೌರಿಗೂ ಬಲು ನಿಕಟ ಸಂಬಂಧ. ಇಂಥ ಹೊಂದಾಣಿಕೆ, ನಾಡಿನಲ್ಲಿ ಅಲ್ಲೊಂದು ಇಲ್ಲೊಂದು ಸಿಗುವುದೂ ಕಷ್ಟ!

ಕುವೆಂಪುರವರ ಮಾತಿಗೆ, ದೇ.ಜ.ಗೌರವರ ಪ್ರಸ್ತಾಪನೆ ಇರಲೇಬೇಕು. ನೆಹರೂ ನಂತರ ಯಾರು? ಎಂದು ಜನಕೋಟಿ ಕೇಳಿದಾಗ ಆ ಪ್ರಶ್ನೆಗೆ ಉತ್ತರ ಅಷ್ಟು ಸುಲಭವಾಗಿ ಸಿಗಲಿಲ್ಲ. ಆದೆ ಪುಟ್ಟಪ್ಪನವರ ನಂತರ ಮೈಸೂರು ವಿಶ್ವ ವಿದ್ಯಾನಿಲಯಕ್ಕೆ ಉಪಕುಲಪತಿ ಪಟ್ಟಕ್ಕೆ ಬರುವ ಕನ್ನಡಿಗರು ಯಾರು? ಎಂದು ಕೇಳಿದಾಗ, ದೇಜಗೌ ಎನ್ನುವ ಮಾತು ಕನ್ನಡಿಗರ ಸಹಸ್ರ ಕೊರಳಿನಿಂದ ಮೂಡಿ ಬಂತು. ಸದ್ದುಗದ್ದಲವಿಲ್ಲದೆ ಕೆಲಸವೂ ಸಮರ್ಪಕವಾಗಿ ನಡೆಯಿತು. ಜನ ಮೆಚ್ಚುವಂತಹ ಕಾರ್ಯ ಸಾಗಿತು.

ದೇಜಗೌಗೆ ಕುವೆಂಪುರವರ ಬಗ್ಗೆ ಇನ್ನಿಲ್ಲದ ಗೌರವ, ಪ್ರೀತಿ, ವಿಶ್ವಾಸ ಅಂತಃಕರಣದ ಸಹೃದಯತೆ. ಅಷ್ಟೆ ಗೌರವ ಕಾರಂತ, ಬೇಂದ್ರೆ, ಪು.ತಿ.ನ. ರಲ್ಲಿಯೂ ಕೂಡ. "ಪು.ತಿ.ನ.ರಂಥ ಸದ್ಗುಣಿಯನ್ನು, ಕಾರಂತರಂಥ ಅದ್ಭುತ ವ್ಯಕ್ತಿಯನ್ನು, ಬೇಂದ್ರೆಯಂಥ ಸಹೃದಯಿಯನ್ನು, ನಾನು ಇನ್ನು ಬೇರೆಲ್ಲಿಯೂ ಕಂಡಿಲ್ಲ"ವೆಂದು ಜವರೇಗೌಡರು ಅಭಿಮಾನದಿಂದ ಹೇಳುತ್ತಾರೆ.

"ಕುವೆಂಪುರವರ ಪ್ರಭಾವ ನನ್ನ ಮೇಲೆ ಬಿದ್ದಂತೆ, ಉಳಿದೆಲ್ಲ ಸಾಹಿತಿಗಳ ಪ್ರಭಾವವೂ ಒಂದಲ್ಲ ಒಂದು ರೀತಿಯಿಂದ ನನ್ನ ಮೇಲೆ ಬಿದ್ದಿದೆ. ಅವರೆಲ್ಲರ ಆಶೀರ್ವಾದ ನನ್ನ ಮೇಲೆ ಬಿದ್ದಿರುವುದರಿಂದ ನನ್ನ ಜೀವನದಲ್ಲಿ ಅನೇಕ ಆಕಸ್ಮಿಕ ಘಟನೆಗಳು ಕೈಗೂಡಿವೆ; ಇವೆಲ್ಲವೂ ಸದ್ಭಾವನೆಯಿಂದ ನಡೆದ ಮಹತ್‌ಕಾರ್ಯ."

ಕುವೆಂಪುರವರಂತೆ ಇವರೂ ಕೂಡ ರಾಮಕೃಷ್ಣಾಶ್ರಮದಲ್ಲಿ ಇದ್ದು ಜಾತೀಯ ಸೋಂಕನ್ನು ನಾಶಮಾಡುವ ಧೀರತೆಯನ್ನು ಮೈಗೂಡಿಸಿಕೊಂಡಿರು ವುದರಿಂದ ಅವರ ದೃಷ್ಟಿಯಲ್ಲಿ ಕೇವಲ ಎರಡು ಜಾತಿ ಮಾತ್ರ: ಗಂಡು ಮತ್ತು ಹೆಣ್ಣು. ಅನ್ಯ ಜಾತಿಗೆ ಅವಕಾಶ ಕೊಟ್ಟು, ದೇಶದಲ್ಲಿ ಕ್ಷುದ್ರ ವಾತಾವರಣ ವನ್ನು ನಿರ್ಮಿಸುವುದು ಮಹಾ ಪಾಪಕರ ಎಂದು ಅವರ ವಾದ.

ಜಾತೀಯತೆ ಶಿಕ್ಷಣ ಕ್ಷೇತ್ರದಲ್ಲಿಯೂ ಇರುವುದನ್ನು ಕಂಡು, ಉಪಾಧ್ಯಾಯ ವೃತ್ತಿ ಕೀಳುತನದಲ್ಲಿರುವುದನ್ನು ನೋಡಿ, ಅದರ ವಿಮುಕ್ತಿಗಾಗಿ ಹೋರಾಟ. ಸರ್ಕಾರಿ ಕೆಲಸದಿಂದ, ವಿಶ್ವವಿದ್ಯಾನಿಲಯಕ್ಕೆ ಪ್ರವೇಶ.

ಅಲ್ಲಿ, ಕನ್ನಡ ಡಿಂಡಿಮ ಬಾರಿಸಲು ನಗಾರಿಗೆ ಹೊಸ ಬಿಗು, ಹೊಸ ಹದ. ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಕಹಳೆ ಊದಿದರೆ, ಇಡೀ ಕರ್ಣಾಟಕ ಜನ ಕೋಟಿಯ ಕಿವಿಗೆ ಕೇಳಬೇಕೆಂಬ ಆಸೆ. ಇದಕ್ಕಾಗಿ ಕನ್ನಡವನ್ನು ಶಿಕ್ಷಣ ಮಾಧ್ಯಮ ವನ್ನಾಗಿ ಮಾಡಲು ಗುರುವಿನೊಡನೆ ಶ್ರಮ. ಅಲ್ಲಿಯ ತನಕ ಸಾಹಿತ್ಯ ರಚನೆಗೆ ಶರಣು. ಮೊದಲು ಕನ್ನಡದ ಉಳಿವು, ಅದರ ಸ್ಥಾನಮಾನದ ರಚನೆ ಇದೆಲ್ಲವೂ ಆಗಬೇಕೆಂದು ಛಲ ಚಾಮುಂಡಿಯಾಗಿ ಹಟ–ಇವರಿಂದಾಗಿ ಕನ್ನಡದ ಪ್ರಾಧ್ಯಾಪಕ ಸ್ಥಾನಕ್ಕೆ ಹೊಸ ಮೆರಗು, ದಕ್ಷತೆಯ ಪ್ರಾಣಸಂಚಾರ, ದಿಟ್ಟತನದ ನಿಲುವು. "ಕನ್ನಡದಲ್ಲಿ ಇತರ ಭಾಷೆಗಳ ಉತ್ಕೃಷ್ಟ ಸಾಹಿತ್ಯ ಕೃತಿಗಳ ಭಾಷಾಂತರವಾಗ ಬೇಕು. ವಿಶ್ವಸಾಹಿತ್ಯದಲ್ಲಿ ಕನ್ನಡಕ್ಕೆ ಸ್ಥಾನ ಸಿಗಲು, ಕನ್ನಡದ ಉತ್ತಮ ಕೃತಿ ಗಳು, ಇತರ ಭಾಷೆಗಳಲ್ಲೂ ಪ್ರಕಟವಾಗಬೇಕು, ಉತ್ತಮ ಭಾಷಾಂತರ ನಡೆಯ ಬೇಕು. ಇದು ವಿಶ್ವವಿದ್ಯಾಲಯದಲ್ಲಿರುವ ವಿಚಾರವಂತರು ಮಾಡುವ ಮೊದಲ ಕೆಲಸವಾಗಬೇಕು" ಎಂದು ಜವರೇಗೌಡರು ಮೊದಲಿನಿಂದಲೂ ಹೇಳುತ್ತಾ ಬಂದ ವ್ಯಕ್ತಿ.

ಕವಿತೆ, ವಿಚಾರಪರ ಲೇಖನ, ಭಾಷಾಂತರ, ಜೀವನಚರಿತ್ರೆ, ಜಾನಪದ, ಪತ್ರಿಕಾ ಲೇಖನ, ಉಪನ್ಯಾಸ ಮುಂತಾದವುಗಳು ಸೇರಿ, ಐವತ್ತಕ್ಕೂ ಹೆಚ್ಚಿನ ಕೃತಿಗಳನ್ನು ಕನ್ನಡದ ರಸಗಟ್ಟಿಗೆ ಪಾಕ ಹೊಯ್ದ ಶ್ರೇಷ್ಠ ಸಾಹಿತಿ. ಮೋತಿ ಲಾಲರ ಜೀವನ ಚರಿತ್ರೆ ಕನ್ನಡ ಸಾಹಿತ್ಯಕ್ಕೊಂದು ಗೋಪುರಸಿಂಗಾರ.

ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಗೆ ಬಂದು ಹೋಗದೆ ಇರುವ ಸಾಹಿತಿಗಳಿಲ್ಲ. ನಿತ್ಯವೂ ಅಲ್ಲಿ ಸಾಹಿತ್ಯದ ದಾಸೋಹ, ಗದ್ಯ, ಪದ್ಯ, ವಿಮರ್ಶೆಯ ಸಂಕಿರಣ, ವಿಶ್ವಸಾಹಿತಿಗಳ ಸಮ್ಮೇಳನ, ವಿಚಾರವೇತ್ತರ ಭಾಷಣ, ಇದೆಲ್ಲವೂ ಜವರೇಗೌಡರ ಪ್ರಭಾವದಿಂದ ಮೂಡಿ ಬಂದ ಹೊಸ ಸೃಷ್ಟಿ.

ದೇಜಗೌರವರಿಗೆ ಈಗ ಅರವತ್ತೈದು ವರ್ಷ. ಇವರ ಐವತ್ತನೇ ಹುಟ್ಟು ಹಬ್ಬವನ್ನು ನಾಡಿಗೆ ನಾಡೇ ಆಚರಿಸಿತು. ನೂರು ವರ್ಷ ಬಾಳಲೆಂದು ಹರಸಿತು. ಮಿತ್ರರೂ ಹಿತೈಷಿಗಳೂ ಗೌಡರನ್ನು ಕೊಂಡಾಡಿದರು. ಐವತ್ತನೇ ಹುಟ್ಟುಹಬ್ಬ ಇಷ್ಟೊಂದು ಅದ್ದೂರಿಯಿಂದ ನಡೆದಿರುವುದು ಬಹು ವಿರಳ. ದೇಜಗೌ ಪುಣ್ಯ ಶಾಲಿ, ಅದೃಷ್ಟವಂತ.



# ಶ್ರೀ ವಿ. ಸೀತಾರಾಮಯ್ಯ

ಮಹಾತ್ಮಾ ಗಾಂಧಿಯವರು ಜನ್ಮನೆತ್ತಿದ್ದು ಅಕ್ಟೋಬರ ಎರಡರಂದು. ಪ್ರಸಿದ್ಧ ಸಾಹಿತಿ ಡಾ|| ವಿ. ಸೀತಾರಾಮಯ್ಯನವರ ಜನ್ಮದಿನವೂ ಅಂದೇ. ಈಗ ಸೀತಾರಾಮಯ್ಯನವರಿಗೆ ಎಂಬತ್ತು ವರ್ಷ ತುಂಬಿವವು. ಗಾಂಧಿ ಈ ಪ್ರಪಂಚದ ಮಾನವತಾವಾದಿ, 'ವಿ. ಸೀ' ಸಾಹಿತ್ಯ ಲೋಕದ ನೇತಾರ. 'ವಿ. ಸೀ' ಯವರಿಗೆ, ಎಂಬತ್ತು ವರ್ಷ ಕಳೆಯಿತು ಅಂದರೆ ನಂಬುವುದು ಕಷ್ಟ.

ಅವರ ದಿನಚರಿ ಪದ್ಧತಿ, ಮೂವತ್ತು ವರ್ಷದವರಾಗಿದ್ದಾಗ ಇದ್ದ ಪದ್ಧತಿಯೇ ಇಂದೂ ಇದೆ. ಅದೇ ಶಿಸ್ತು, ಅದೇ ವಿನಯ, ಅದೇ ಆದರ್ಶ.

ವಿ. ಸೀ. ಒಬ್ಬ ಸೌಮ್ಯ ಪುರುಷ, ನಾಜೂಕಿನ ವ್ಯಕ್ತಿ, ಗರಿ ಗರಿ ಕಟ್ಟುವ ತಿದ್ದಿದ ರುಮಾಲು, ಎದೆ ಮುಚ್ಚಿದ ಕೋಟು, ನೀಟಾದ ಪಂಚೆ. ಸಾದಾ ಚಪ್ಪಲಿ, ಚಪ್ಪಲಿಯ ಮೇಲುಬಾರಿಗೆ ಸದಾ ಹೊಳೆಯುವ ಪಾಲೀಶು. ಸಂಜೆಯ ಕಾಲದಲ್ಲಿ, ಗಾಳಿಗೆ ಹೊರಟಾಗ, ಇವರ ವ್ಯಕ್ತಿತ್ವದ ಚೆಲುವನ್ನು ನೋಡಲು ಆನಂದ.

ಹಿಂದಿನ ಮತ್ತು ಇಂದಿನ ಕಾಲದ ಸಾಹಿತಿಗಳಲ್ಲಿ ವಿ. ಸೀ.ಯವರಿಗೊಂದು ವಿಶಿಷ್ಟಸ್ಥಾನ, ಅವರು ಸಾಹಿತ್ಯಲೋಕದ ಅನನ್ಯ ವ್ಯಕ್ತಿ.

ವಿ. ಸೀ.ಯವರು ಭಾಗವಹಿಸಿದ ಸಭೆಗಳು ಅಸಂಖ್ಯಾತ. ಅವರು ಕವಿಗೋಷ್ಠಿ, ವಿಚಾರ ಸಂಕಿರಣ, ಸಮ್ಮೇಳನ ಇವುಗಳಲ್ಲಿ ಮಾತ್ರವಲ್ಲದೆ, ರಾಷ್ಟ್ರೀಯ ಸಭೆಗಳಲ್ಲಿ ಭಾಗವಹಿಸಿ, ತಮ್ಮ ವಿಚಾರ ಧಾರೆಯನ್ನು ಪ್ರಚುರಪಡಿಸಿದ ಉದ್ದಾಮ ಪಂಡಿತರು. "ಪಂಪ"ನನ್ನು ಕುರಿತು, ಕನ್ನಡ ಮತ್ತು ಇಂಗ್ಲೀಷ ಎರಡರಲ್ಲಿಯೂ ಕೃತಿ ರಚಿಸಿದ ಸಾಹಿತಿ.

ನೋಟಕ್ಕೆ ಸಂಪದ್ರಾಯ ಶರಣರೆಂದು ಕಂಡರೂ ಕ್ರಾಂತಿವಾದಿಗಳು. ಸಮುದ್ರವಷ್ಟು ಮನಸ್ಸು ವಿಶಾಲ. ಕಾವ್ಯ, ಕತೆ, ನಾಟಕ, ವಿಮರ್ಶೆ ಎಲ್ಲದರಲ್ಲಿಯೂ ಬರೆದು ಇಪ್ಪತ್ತೈವಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದವರು. ವಿಚಾರತೆ ಮತ್ತು ಪ್ರಸನ್ನತೆ, ಎರಡೂ ಒಂದೇ ವ್ಯಕ್ತಿಯಲ್ಲಿ ಅತಿ ಸುಲಭವಾಗಿ ಸಿಗಬಹುದಾದ ಸಂಪತ್ತು. ವಿವಿಧ ವಿಚಾರಗಳನ್ನು ಕುರಿತು ಬರೆದ ಲೇಖನಗಳ ಸಂಖ್ಯೆ ಅಪರಿಮಿತ.

ವಿ. ಸೀ. ಯವರ ಮಾತು ಲೋಕಪ್ರಿಯ. ಅವರ ಪುಸ್ತಕದ ಮುದ್ರಣದ ಅಂದ ಚಂದವೇ ಬಲು ಸೊಗಸು. ಸಂಪ್ರದಾಯಸ್ಥ ವಿ.ಸೀ. ಯವರಿಗೂ ಸೊಗಸುಗಾರ ವಿ. ಸೀಯವರಿಗೂ, ನಿಕಟ ಸಂಬಂಧ. ಅವರು ನಾಡಿನ ಒಳಗೂ, ಹೊರಗೂ ಪ್ರಸಿದ್ಧರಾದ ಲೇಖಕರು. ನ್ಯಾಯ, ಧರ್ಮಗಳ ತಕ್ಕಡಿಯನ್ನು ತೂಗುವ ಯಜಮಾನ, ಕಲೋಪಾಲಕ. ಸಾಹಿತ್ಯದ ಕಾವ್ಯ ಪ್ರಕಾರವನ್ನು ಬೆಳಗಿದ ಕನ್ನಡ ರತ್ನ, ಅಂತಃಪ್ರಜ್ಞೆಗೆ ರನ್ನಗನ್ನಡಿ ಹಿಡಿದ ಮೇಧಾವಿ.

ವಿ. ಸೀ. ಯವರು ಕವಿಯಾಗಿ. ಪ್ರಾಧ್ಯಾಪಕರಾಗಿ, ಕನ್ನಡದ ಸುಪ್ರಜರಾಗಿ ಜೀವನವನ್ನು ಸಫಲಗೊಳಿಸಿ ಕೊಂಡವರು. ಇಂದಿನ ಕನ್ನಡ ಕವಿಗಳಲ್ಲಿ ಮೊದಲ ಸಾಲಿನ ಮನ್ನಣೆಗೆ ಪಾತ್ರರು. ಪ್ರಾಧ್ಯಾಪಕ ವರ್ಗದಲ್ಲಿ, "ಕನ್ನಡ ಕುಲದೀಪಕ"ರಲ್ಲಿ ಕೂಡ ಶ್ರೇಷ್ಠ ಸ್ಥಾನ ಶಾಸ್ತ್ರಕಾರ, ವಿಮರ್ಶಕ, ವಾಗ್ಮಿ, ಕಲಾರಸಿಕ ಈ ಎಲ್ಲ ಅಂತರ್ವ್ಯಕ್ತಿಗಳೂ ಒಂದೇ ಉದಾತ್ತ ಸಂಸ್ಕೃತ ಜೀವನದ ಅವಿಷ್ಕಾರವಾಗಿರುವುದು ವಿ. ಸೀ. ಯವರ ವ್ಯಕ್ತಿತ್ವದ ಪ್ರಮುಖ ಅಂಶ.

ಅಷ್ಟೇ ಪ್ರಮುಖವಾದ ಮತ್ತೊಂದು ಅಂಶ–ಅವರ ಶಕ್ತಿ ಸಾಮರ್ಥ್ಯಗಳು, ದೊರೆತ ಕೀರ್ತಿಗಿಂತ ಒಂದು ಅಡಿ ಎತ್ತರಕ್ಕೆ ನಿಂತ ಶೀಲ ಸಂಪನ್ನತೆಯ ಭದ್ರರಕ್ಷೆ. ಇಂದಿನ ಕನ್ನಡ ಕವಿ ಸಂಕುಲದಲ್ಲಿ ಕರ್ಮಕುಶಲತೆಗೆ ಬೆರಳು ತೋರಬಹುದಾದ ಹಿರಿಯ ವ್ಯಕ್ತಿತ್ವ. ಅಂತೆಯೇ ಅವರ ಜೀವನದ ಹಲವು ಮಜಲು, ಇಂದು ಕನ್ನಡತನ ರೂಪಿಸಿ ಕೊಳ್ಳಬಹುದಾದ ಬಾಳಿಗೆ ಒಂದು ಮಾದರಿ.

ಆಚಾರ್ಯ ಬಿ. ಎಂ. ಶ್ರೀಯವರ ಪರಮ ಶಿಷ್ಯರಲ್ಲಿ ವಿ. ಸೀ. ಯವರೂ ಒಬ್ಬರು. ಶ್ರೀಯವರ ಪಾಂಡಿತ್ಯದ ಪ್ರಭಾವ ಅವರಲ್ಲಿರುವ ಇಂಗ್ಲೀಷ ಸಾಹಿತ್ಯದ ಅನುಭವ, ವಿ. ಸೀ. ಯವರ ಮನಸ್ಸಿಗೆ ತಾಗಿತು. ತಾವು ಓದುವುದರ ಜೊತೆಗೆ, ಸಾಹಿತ್ಯದ ಅಭ್ಯಾಸಕ್ಕೆ ತೊಡಗಿದರು, ಎಂ. ಎ. ಪದವಿಯೂ ದೊರಕಿತು.

ಜೀವನದಲ್ಲಿ ಹೊಸ ಹುರುಪು, ಹೊಸತನ ಕಂಡುಕೊಳ್ಳಲು ಪ್ರಯತ್ನ ಸಾಗಿತು. ಕನ್ನಡ ಮತ್ತು ಇಂಗ್ಲೀಷ ಎರಡೂ ಭಾಷೆಗಳ ಅಭ್ಯಾಸ ಒಮ್ಮೆಗೇ ಸಾಗಿತು. ಪಾಶ್ಚಿಮಾತ್ಯ ದೇಶದ ಹಲವು ಪತ್ರಿಕೆಗಳನ್ನು ಅಂಚೆ ಮೂಲಕವೇ ತರಿಸಿಕೊಂಡು ಅದರ ಅಭ್ಯಾಸವೂ ಸಾಗಿತು.

ಇವರದು ಕವಿ ಹೃದಯ, ಭಕ್ತಕವಿಯ ಅಂತರಂಗ, ಹೃದಯ ಸಂಪತ್ತು ಸೂಕ್ಷ್ಮದೃಷ್ಟಿ. ಇದು, ವಿ.ಸೀ. ಯವರಿಗೆ ಜನ್ಮದಿಂದ ಬಂದ ಸೊತ್ತು, ಜೀವನದ ಪರಿಶುದ್ಧ ಪರಿಶ್ರಮದಿಂದ ಬಂದ ಸಾಧನೆಯ ಫಲ. ಜೀವನದ ತಳ ಬುಡವನ್ನೇ ಅಲುಗಿಸುವಂತಹ ಘೋರ ಕಷ್ಟ ಬಂದರೂ, ತಾಳ್ಮೆಗೆಡದ ವಿವೇಕಿ. ವಿದ್ಯಾರ್ಥಿಗಳ ಜೊತೆ ಬೆರೆತು, ಅವರ ಕಷ್ಟ ಕಾರ್ಪಣ್ಯವನ್ನು ನೀಗಿಸುವ ಮಹಾ ಸೇನಾನಿ. ಕಾರಂತರು, ಮಾಸ್ತಿಯವರು, ವಿನಾಯಕರು, ವಿ. ಸೀ. ಯವರ ಬಗೆಗೆ ಕಂಡ ನೋಟ ಬಲು ಅಂದ. ಅವರೊಬ್ಬರು ರೂಪಾರಾಧಕರು. ಅವರ ವ್ಯಕ್ತಿತ್ವವನ್ನು ಸಾಮಾನ್ಯರಾದ ನಾವು ಅಳೆಯುವುದು ಕಷ್ಟಕರ.

ಸಾಹಿತ್ಯ ಪರಿಷತ್ತಿಗೆ ಹೋಗುವವರು ಚಾಮರಾಜ ಪೇಟೆಯ ರಸ್ತೆಯಲ್ಲಿ ಇವರ ಮನೆಯನ್ನು ಹಾದು ಹೋಗಬೇಕು. ಚಿಕ್ಕದಾದ ಮನೆ, ನಿರಾಡಂಬರ, ಸರಳ ಸೌಜನ್ಯದ ಪ್ರತೀಕ. ಚಾಪೆ, ಖುರ್ಚಿ ಎಲ್ಲ ತರದ ಆಸನ. ಕೋಟು, ರುಮಾಲು, ಕಳಚಿಡಲು ಪ್ರತ್ಯೇಕ ಸ್ಥಳ. ಸಂಪ್ರದಾಯ ಶರಣ. ಸಂಗೀತ ಕೇಳುವುದೆಂದರೆ, ಪಂಚಪ್ರಾಣ. ತಮ್ಮ ಕಾವ್ಯದಲ್ಲಿಯೂ ಸಂಗೀತಕ್ಕೆ ಪ್ರಾಧಾನ್ಯ.

ಬೆಂಗಳೂರು, ಮೈಸೂರು, ಹೊನ್ನಾವರ ಇವೆಲ್ಲವೂ ವಿ. ಸೀತಾರಾಮಯ್ಯನವರ ವಿದ್ಯಾಪ್ರಸಾರ ಕ್ಷೇತ್ರ. ಆಕಾಶವಾಣಿಯಲ್ಲಿ ಕೆಲವುಕಾಲ ಸೇವೆ. ಕಾರವಾರದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದ ಅಗ್ರಸ್ಥಾನ. ಇದೊಂದು ಅದ್ಭುತ ಅಪೂರ್ವರಿಯ ಸಮ್ಮೇಳನ, ಬಹುಕಾಲ ಉಳಿಯುವಂತಹ ನೆನಪು.

ಅಧ್ಯಕ್ಷ ಸ್ಥಾನದಿಂದ, ವಿ. ಸೀಯವರ ಪ್ರಸ್ತಾವನೆ, ಹೊಸನಾಂದಿ, ನವ್ಯ ಕಾವ್ಯದ ಹುಯಿಲಿನ ರಂಗಭೂಮಿ. ಇದೆಲ್ಲಕ್ಕೂ ಆಸರೆ, ಅವಕಾಶ ಕೊಟ್ಟು

ವಾದ, ವಿವಾದಗಳಿಗೆ ಚೇತನ ತುಂಬಿದ ಲೌಕಿಕರು. ಹೊಗಳಿಕೆ, ತೆಗಳಿಕೆ, ಎರಡೂ ಒಂದೇ ಎಂಬ ಭಾವನೆ.

ಕಾಯಾ ವಾಚಾ ಕೆಲಸ ಮಾಡುವುದೇ ಅವರ ಸಾಧನೆ. ಅವರ ಧ್ಯೇಯ ನಿಷ್ಠೆ, ಚಿತ್ ತಪಸ್ಸು ಇಂದಿನ ಪೀಳಿಗೆಗೊಂದು ಆರಾಧನೆ.

ಇವರ ಕಾವ್ಯದಲ್ಲಿ, ಹಾವ, ಭಾವ, ಸಂಪ್ರದಾಯ, ದೀರ್ಘತಪಸ್ಸು, ತೀಕ್ಷ್ಣತೆ, ವ್ಯಾಕುಲತೆ, ಎಲ್ಲವೂ ಸಿಗಬಹುದಾದ ವಸ್ತು, ಶ್ರೇಷ್ಠತನದ ವಿಮರ್ಶೆ· ಪಾತ್ರದ ಮೌಲ್ಯಗಳ ಅರಿವು, ಕಲ್ಪನೆಯ ಅಂತಸ್ತುಗಳು.

ಎಲ್ಲವೂ ಒಂದು ಪರಿಮಿತಿಯಿಂದ ಕೂಡಿದ ವ್ಯಕ್ತಿ, ಸಮನ್ವಯದ ಸಿದ್ಧಾಂತ ಹಲವು ವರ್ಷಗಳಿಂದಲೂ ಪ್ರವೃತ್ತಿಯಾಗಿಯೇ ಬೆಳೆದು ಬಂದ ಸಿದ್ಧಿ. ಎಲ್ಲ ವಿಚಾರ ಗಳನ್ನೂ ಸಹಾನುಭೂತಿಯಿಂದ ಪರಿಶೀಲಿಸಿ ನಿರ್ಣಯಕ್ಕೆ ಬರುವ ವಿ. ಸೀ. ಯವರು ತಾವು ನಡೆಯುವ ದಾರಿಯಲ್ಲಿ ಎಂದೂ ನಿಂತಿಲ್ಲ. ಅನುಭವದ ಆಳ ಅಗಲಗಳನ್ನು ಈ ವ್ಯಕ್ತಿತ್ವ ಸಂಪೂರ್ಣವಾಗಿ ಅರಿತುಕೊಂಡಿರುವುದರಿಂದ, ಇವರೊಬ್ಬ ಪರಿಪೂರ್ಣ ವ್ಯಕ್ತಿ, ಬಾಳಿನ ಹಿರಿಮೆಯನ್ನು ಅರಿತುಕೊಂಡ ದಿವ್ಯ ಶಕ್ತಿ, ಆದರ್ಶ ಜೀವನದ ಹಿರಿಯ ಸಾಕ್ಷಿ.



# ಶ್ರೀ ಶ್ರೀನಿವಾಸ ಉಡುಪ

ಶಿವಮೊಗ್ಗೆ ಜಿಲ್ಲೆಯ ಹೊಸನಗರ ಎಂದೊಡನೆ ನೆನಪಾಗುತ್ತದೆ, ಕಾಂಬಳೀಕಾರ ಶ್ರೀ ಶ್ರೀನಿವಾಸ ಉಡುಪರ ಹೆಸರು. ಮಲೆನಾಡಿನ ಸೌಂದರ್ಯ ಐತಿಹಾಸಿಕ ನಗರ, ರಮಣೀಯವಾದ ಜೋಗ ಜಲಪಾತ, ಇದು ಎಷ್ಟು ಸೊಬಗನ್ನು ಕೊಡಬಲ್ಲದೋ ಅಷ್ಟೇ ಆನಂದವನ್ನು, ಜ್ಞಾನವನ್ನು, ಹಿಗ್ಗನ್ನು, ಆತ್ಮೀಯತೆಯನ್ನು ಕೊಡಬಲ್ಲರು ಶ್ರೀ ಶ್ರೀನಿವಾಸ ಉಡುಪರು. ಉಡುಪರು ಎನ್ನುವ ಮನೆತನ ಹೊಸನಗರ ತಾಲ್ಲೂಕಿನಲ್ಲಿ ಅತ್ಯಂತ ಪ್ರತೀತಿಯಲ್ಲಿರುವ ಹೆಸರು. ವ್ಯವಹಾರ ಚತುರರ ಬೀಡು, ಪರೋಪಕಾರಿಗಳ ನೆಲೆ.

ಇಂತಹ ಒಂದು ಪರಿವಾರದಲ್ಲಿ ೧೯೩೩ ರಲ್ಲಿ ಶ್ರೀನಿವಾಸ ಉಡುಪರ ಜನನ. ತಂದೆ ಸಾಮಾನ್ಯ ಒಬ್ಬ ವ್ಯವಸಾಯಗಾರ. ತಾಯಿ ಹಿಂದಿನ ಕಾಲದ ಹೆಣ್ಣು. ಹಳ್ಳಿ ಜೀವನದಲ್ಲಿ ಬೆಳೆದು, ತಕ್ಕಮಟ್ಟಿಗೆ ವಿದ್ಯಾಭ್ಯಾಸವನ್ನು ಕಲಿತರೂ ಜೀವನ

ಸಮಸ್ಯೆ ಈ ಸಂಸಾರವನ್ನು ಕಾಡುವಂತಾಯಿತು. ಇದಕ್ಕಾಗಿ ಶ್ರೀ ಶ್ರೀನಿವಾಸ ಉಡುಪರಿಂದ ಕಾಸಗಿಯ ಮನೆಯಲ್ಲಿ ಪ್ರಾಥಮಿಕ ವಿದ್ಯಾರ್ಥಿಗಳಿಗೆ ಪಾಠ. ಸಂಗಡ ತಾವೂ ಓದುವ ಹುಚ್ಚು. ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ, ಸಾರ್ವಜನಿಕ ಸಮಾರಂಭಗಳಲ್ಲಿ ವಿಶೇಷ ಆಸಕ್ತಿ. ಮಾತನಾಡಲು ಬಾರದವನನ್ನ ಮಾತನಾಡಿ ಸುವ ಚಪಲ. ಕುಕ್ಕಿ, ಕೆಣಕಿ, ತಿವಿದು, ಜನರ ಮನಸ್ಸನ್ನ ತಮ್ಮ ಕಡೆಗೆ ಸೆಳೆಯುವ ತವಕ, ಎಂತವರನ್ನು ಕ್ಷಣಾರ್ಧದಲ್ಲಿ ತನ್ನವರನ್ನಾಗಿ ಮಾಡಿಕೊಳ್ಳುವ ಕುಶಾಗ್ರತೆ. ಸಿಟ್ಟು ದೂರ, ಸ್ನೇಹ ಹತ್ತಿರ, ಜಡತ್ವ ಎನ್ನುವುದು ಇವರ ಜಾಯ ಮಾನಕ್ಕೆ ಗೊತ್ತಿಲ್ಲದ ವಿಷಯ. ಏನೂ ಎಂದರೆ ಸಾಕು, ಇದ್ದೇನೆ ಎನ್ನುವ ಭರವಸೆ. ಜೀವನದ ಉದ್ದಕ್ಕೂ ಕರ್ತವ್ಯದ ಸರಮಾಲೆ. ಕೆಲವರಿಗೆ ಕೀರ್ತಿ ಇನ್ನೊಬ್ಬರಿಂದ ಬರುತ್ತದೆ, ಕೆಲವರು ತಾವಾಗಿ ಲಭಿಸಿಕೊಳ್ಳುತ್ತಾರೆ. ನಾಲ್ಕು ಎಂಟಾಗುತ್ತದೆ, ಎಂಟು ಹದಿನಾರಾಗುತ್ತದೆ. ಉಡುಪರ ಜೀವನ ಅಪ್ಪಟ ಚಿನ್ನ ಅಷ್ಟೇ ಅಲ್ಲ ಶುದ್ಧ ಅಪರಂಜಿ.

ಉಡುಪರಿಗೆ ಈಗ ನಲವತ್ತೈದು ವರ್ಷ. ಅವರ ಜೀವನದ ಇಪ್ಪತ್ತೆರಡನೇ ವರ್ಷದಲ್ಲಿ ಸಾಹಿತ್ಯಸೃಷ್ಟಿಗೆ ಪ್ರಾರಂಭ. ಐವತ್ತಕ್ಕೂ ಹೆಚ್ಚಿನ ಕಾದಂಬರಿಗಳು. ಹತ್ತು ಕಥಾಸಂಕಲನ, ಐದು ನಾಟಕಗಳು, ಎಂಟು ಸಂಪಾದಿತ ಕೃತಿ, ಸಾವಿರಕ್ಕೂ ಹೆಚ್ಚು ಬಿಡಿ ಬರಹಗಳು, ಇದು ಎರಡು ದಶಕದಲ್ಲಿ ನಡೆದ ಮಹತ್ಕಾರ್ಯ. ಇವರ ಮೊಟ್ಟ ಮೊದಲ ಕಾದಂಬರಿ ಸಾಗರದ ಜಲಂಧರ ಪ್ರಕಟನಾಲಯದಲ್ಲಿ "ಕೆಂಪು ತುಟಿ" ಪ್ರಕಟವಾಯಿತು. ದೆಸೆ ತಿರುಗಿತು, ಶಾರದೆ ಒಲಿದಳು. ಪ್ರಕಾಶಕರಿಂದ ಒತ್ತಾಯದ ಮೇಲೆ ಒತ್ತಾಯ. ತಿಂಗಳಿಗೊಂದು ಕಾದಂಬರಿ, ದಿನಕ್ಕೊಂದು ಕಥೆ ವಾರಕ್ಕೊಂದು ನಾಟಕ ರಚನೆಯಾಯಿತು, ಅಚ್ಚಾಯಿತು, ಓದುಗರ ಕೈಸೇರಿತು. ಸುಲಭ ಕೈ ಹೊತ್ತಿಗೆಗಳು ಪ್ರಕಟವಾಗುತ್ತಿರುವ ಕಾಲದಲ್ಲಿ ಉಡುಪರವರಿಗೆ ಬೇಡಿಕೆ, ಸಿದ್ಧ ಸಾಹಿತಿಯ ಪಟ್ಟ, ಆಗ ನಿಂತನೆಲ ಗಟ್ಟಿ. ತಾನಿರುವ ಸರ್ಕಾರಿ ಇಲಾಖೆಯ ಕೆಲಸದಲ್ಲಿ ಚಾಚೂ ತಪ್ಪದೆ ಕೆಲಸ, ಮೇಲಧಿಕಾರಿಗಳ ಪ್ರೀತಿ, ಮೆಚ್ಚುಗೆ. ನಿಷ್ಕಪಟಿ, ಪ್ರಾಮಾಣಿಕ ವ್ಯಕ್ತಿ ಎಂಬ ಕೀರ್ತಿ. ಎಲ್ಲ ಕಡೆಯೂ ಶ್ರೀನಿವಾಸ ಉಡುಪರ ಕೀರ್ತಿ ಪತಾಕೆ.

ಶ್ರೀನಿವಾಸ ಉಡುಪರು ಕಾದಂಬರೀಕಾರರು, ಕತೆಗಾರರು, ನಾಟಕಕಾರರು, ಕವಿಗಳು, ವಿಮರ್ಶಕರು, ಸಾಹಿತ್ಯದ ನಾನಾಭಾಗದಲ್ಲಿ ಎದ್ದು ಕಾಣುವ ವ್ಯಕ್ತಿ. ಇದಕ್ಕೆಲ್ಲ ಪ್ರೇರಕಶಕ್ತಿ, ಪ್ರಕೃತಿ. ನಿತ್ಯಜೀವನದಲ್ಲಿ ತಾನು ಕಂಡಿದ್ದು, ಅನು ಭವಿಸಿದ್ದು, ಇತರೆಯವರಿಂದ ಕೇಳಿದ್ದು, ನಾಡಸುತ್ತಿದ್ದು, ಚರ್ಚಿಸಿದ್ದು, ಗುಡ್ಡ, ಬೆಟ್ಟ, ಶಿಖರ, ಕಾಡು, ಅಡಿಕೆ ತೋಟ, ಹೊಲ, ರಸ್ತೆ, ಕೆರೆ, ನೀರು, ಭಾವಿ,

ದೇವಸ್ಥಾನ ಇದರಿಂದ ಹಿಡಿದು, ಆಧುನಿಕ ಜಗತ್ತಿನ ವೈಭವದವರೆಗೆ, ಮಲೆನಾಡಿನ ಪ್ರಕೃತಿಯ ಸಿರಿಸೊಬಗಿನವರೆಗೆ ಸಾಹಿತ್ಯ ಮೂಡಿ ಬಂದಿದೆ. ಇವರ "ಒಲಿದು ಬಂದವಳು" ಕಾದಂಬರಿಗೆ ೧೯೬೭ ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, ೧೯೬೨ ರಲ್ಲಿ "ಅಮೃತಹೃದಯ" ನಾಟಕಕ್ಕೆ ಅಖಿಲ ಭಾರತ ಆಕಾಶ ವಾಣಿಯಿಂದ ಉತ್ತಮ ನಾಟಕಕ್ಕಾಗಿ ಬಹುಮಾನ, ೧೯೭೪ ರಲ್ಲಿ "ಸಂಭಾವಿತ" ಕಥಾಸಂಕಲನಕ್ಕೆ ದೇವರಾಜ ಬಹದ್ದೂರು ಬಹುಮಾನ, ಗೌರವಗಳು, ಪುರಸ್ಕಾರ ಗಳು, ಸನ್ಮಾನಗಳು ಲೆಕ್ಕವಿಲ್ಲದಷ್ಟು ನಡೆದವು. ಇಷ್ಟಾದರೂ, ಸದ್ದಿಲ್ಲ, ಗದ್ದಲ ವಿಲ್ಲ, ಆರ್ಭಟವಿಲ್ಲ, ಅಬ್ಬರವಿಲ್ಲ, ಏರಿಲ್ಲ, ಇಳಿತವಿಲ್ಲ. ಸರಿಸಮಾನ ಹವಾಮಾನ ಒಂದೇ ರೀತಿ. ಬಿಸಿಲೂ ಇಲ್ಲ, ಮಳೇನೂ ಇಲ್ಲ. ಸಾಹಿತ್ಯಕ್ಕೆ ಜಾತಿ ಇಲ್ಲವೆಂದು ಪ್ರಾಜ್ಞರು ಹೇಳುತ್ತಾರೆ. ಸಾಹಿತ್ಯ ಯಾವ ಜಾತಿಯದು ಎಂದು ಈ ತನಕ ಯಾರೂ ಪ್ರಶ್ನಿಸಿದ ಸಂಗತಿ ತಿಳಿದು ಬಂದಿಲ್ಲ. ಸಾಹಿತ್ಯ ಸೃಷ್ಟಿಸಿದ ಸಾಹಿತಿಯ ಜಾತಿಯನ್ನು ಪತ್ತೆಹಚ್ಚಲು ಯಾರೂ ಹೊರಟಿಲ್ಲ. ಹೀಗಿರುವಾಗ ಶ್ರೀನಿವಾಸ ಉಡುಪರು ಎಲೆಮರೆಯ ಕಾಯಿಯಂತೆ ಸದ್ದುಗದ್ದಲವಿಲ್ಲದೆ ಇರಲು ಕಾರಣವೇನು? ಈ ಪ್ರಶ್ನೆಗೆ ಉತ್ತರವನ್ನು ನಾನು ಹೇಳಲಾರೆ. ಅದನ್ನ ಜನತೆಗೇ ಬಿಡಬೇಕಾದ ವಿಷಯ.

ಶ್ರೀ ಉಡುಪರ, ಬದುಕು, ಶೀಲವಂತೆ, ಜೀವನದ ಒತ್ತೆಗಾರ, ತುಂಬಿದ ಬಾಳು, ಆಕರ್ಷಣೆ, ಈ ಪುಸ್ತಕಗಳು ಸಮಗ್ರ ಜೀವನದ ಏರು ಪೇರು ಗಳನ್ನು ಸುಖ ದುಃಖವನ್ನು ಚಿತ್ರಿಸುವ ಕಾದಂಬರಿಯನಾದರೆ, ಕೆಂಪುತುಟಿ, ಒಲಿದು ಬಂದವಳು, ಹೆಣ್ಣಿನ ಸಂಭ್ರಮ, ಪ್ರೇಮದ ಮನೆ, ಪ್ರೇಮಸಂಸಾರ, ಮದುವೆ ಹೆಣ್ಣು, ಈ ಕಾದಂಬರಿಗಳು ಗಂಡು ಹೆಣ್ಣುಗಳ ಪರಸ್ಪರ ಜೀವನದ ತಾಳಮೇಳವನ್ನು ಒಳಿತು ಕೆಡಕನ್ನು ಚಿತ್ರಿಸುವ ಮತ್ತೊಂದು ಮುಖ. ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದದ್ದನ್ನು ಉಳಿಸಿಕೊಂಡು, ಬೆಳೆಸಿಕೊಂಡು, ಚಿರಂತನ ಹೋರಾಟದ ಸಾಹಸವನ್ನೆ ಸದಾ ಮಾಡುತ್ತಿರುವ ಶ್ರೀನಿವಾಸ ಉಡುಪರಿಗೆ, ವೈರಿ ಗಳೇ ಇಲ್ಲ. ಗಂಡಸರು ಬೇಕು, ಹೆಂಗಸರೂ ಬೇಕು, ದೊಡ್ಡವರು ಬೇಕು, ದಡ್ಡರೂ ಬೇಕು, ಹುಡುಗರು ಬೇಕು, ಅಜ್ಜ ಅಜ್ಜಿಯರು ಬೇಕು, ಇವರೊಡನೆ ಚರ್ಚಿಸ ಬೇಕು, ನಗಬೇಕು. ಸ್ನೇಹದ ಮಾಧುರ್ಯ, ಜೀವನದ ಸೊಬಗು ಅಲ್ಲಿ ಕಂಡು ಕೊಂಡಿದ್ದಾರೆ ಉಡುಪರು.

ಕಳೆದ ೨೦ ವರ್ಷಗಳಿಂದ ಸಾಹಿತ್ಯದ ಉಗಮಸ್ಥಾನ, ಕಲೆಯ ನೆಲೆವೀಡು, ಸಂಗೀತದ ಸಾಗರ ಸಂಸ್ಕೃತಿಯ ತಳಪಾಯವಾದ ಸಾಗರದಲ್ಲಿ ವಾಸವಾಗಿದ್ದು, ಸಾಹಿತ್ಯದ ನಾನಾ ಮುಖದ ಬೆಳವಣಿಗೆಯಲ್ಲಿ ರಸಚೇತನವಾಗಿ, ಹುರುಪನ್ನು,

ಹುಮ್ಮಸ್ಸನ್ನು ಉಂಟುಮಾಡಿ ತಾಯಿ ಶಾರದೆಯ ಕೆಲಸವನ್ನು ಮಾಡುತ್ತಾ ಬಹು ದೊಡ್ಡ ಗೆಳೆಯರ ಗುಂಪನ್ನು ಸಂಪಾದಿಸಿಕೊಂಡು, ಜೀವನದಲ್ಲಿ ಸುಖವನ್ನು, ಸಂತೋಷವನ್ನು, ತೃಪ್ತಿಯನ್ನು ಕಾಣುತ್ತಿದ್ದಾರೆ. ಒಬ್ಬ ಸಾಹಿತಿ ಜೀವನದಲ್ಲಿ ಸಂತೋಷವನ್ನು ತೃಪ್ತಿಯನ್ನು ಕಾಣಬೇಕಾದರೆ ತುಂಬಾ ಅದೃಷ್ಟಬೇಕು.

ಶ್ರೀ ಶ್ರೀನಿವಾಸ ಉಡುಪರು, ಸಾಹಿತ್ಯಕ್ಕೆ ಇಳಿದಿದ್ದು ತುಂಬಾ ಆಕಸ್ಮಿಕ. ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಯನ್ನ ಜೀವನದ ಪ್ರಾರಂಭದಲ್ಲಿ ತುಂಬಾ ಓದುತ್ತಿದ್ದು ಇದರಿಂದ ಸಾಹಿತ್ಯ ಉಗಮವಾಯಿತು. ಮೊದಲು ಆತ್ಮತೃಪ್ತಿಗಾಗಿ ಬರೆದರು. ನಂತರ ಜನ ಓದಲು ಆಸಕ್ತಿ ಬೆಳೆಸುವರಿಂದ ಬರೆದರು. ಜನ ಮೆಚ್ಚುತ್ತಾ ಹೋದಂತೆಲ್ಲ ಬರವಣಿಗೆಯೂ ವಿಪುಲವಾಯಿತು. ಉಡುಪರಿಗೂ ಸಹ ತಾನು ಇಷ್ಟೊಂದು ಬರವಣಿಗೆಯನ್ನು ಬರೆಯುತ್ತೇನೆ ಎಂಬ ಕಲ್ಪನೆ ಇರಲಿಲ್ಲ. ಶಾರದೆ ಒಲಿದಳು ಬರಹ ಚೊಕ್ಕವಾಯಿತು.

ಇವರ 'ಸಂಭಾವಿತ' ಕಥಾಸಂಕಲನಕ್ಕೆ ದೇವರಾಜ ಬಹದ್ದೂರ್ ಪ್ರಶಸ್ತಿ ಈಗ ದೊರಕಿದೆ. ಇದರಿಂದ ಇವರ ಬರಹಕ್ಕೆ ಇನ್ನಷ್ಟು ತೂಕ ಬಂದಿದೆ. ಜನಪ್ರಿಯತೆ ಹೆಚ್ಚಾಗಿದೆ, ಮಲೆನಾಡಿಗೆ ಕೀರ್ತಿ ಬಂದಿದೆ, ಸಾಗರಕ್ಕೆ ಕಳಶವೇರಿದೆ.

ನಾವು ಯಾವುದೇ ಮಂಗಲ ಶುಭಕಾರ್ಯವನ್ನು ಮಾಡುವಾಗ ವಿನಾಯಕ ನನ್ನು ಸ್ಮರಿಸುತ್ತೇವೆ, ಪೂಜಿಸುತ್ತೇವೆ. ಇನ್ನು ಕೆಲವರು, ತಿರುಪತಿಯ ಶ್ರೀನಿವಾಸ ನನ್ನು ಸ್ಮರಿಸಿ ಕೆಲಸ ಪ್ರಾರಂಭಿಸುತ್ತಾರೆ ಒಳಿತನ್ನು ಪಡೆಯುತ್ತಾರೆ. ಅಂತೆಯೇ ಸಣ್ಣಕಥೆಯ ಪ್ರಸ್ತಾಪ ಬಂದಾಗ ಶ್ರೀನಿವಾಸರನ್ನು, ಕಾದಂಬರಿ ಬಗ್ಗೆ ಪ್ರಸ್ತಾಪ ಬಂದಾಗ ಶ್ರೀನಿವಾಸ ಉಡುಪರನ್ನು ಹೆಸರಿಸುವುದು ಈಗ ರೂಢಿಯಲ್ಲಿದೆ. ಶ್ರೀನಿವಾಸ ಉಡುಪರು ತಮ್ಮ ಪೂರ್ಣ ಆಯುಷ್ಯದಲ್ಲಿ ತಮ್ಮ ವಯಸ್ಸಿನಷ್ಟೇ ಕಾದಂಬರಿ ಬರೆದರೂ ಆಶ್ಚರ್ಯವಿಲ್ಲ. ಆದರಿಂದ ಕೆಡುಕಿಲ್ಲ, ನಷ್ಟವಿಲ್ಲ.



# ಡಾ|| ಹಾ. ಮಾ. ನಾಯಕ

ಹಾರೋಗದ್ದೆ ಮಾನಪ್ಪ ನಾಯಕರಿಗೆ ಈಗ ನಲವತ್ತೆಂಟು ವರ್ಷ ನಡೆಯುತ್ತಿದೆ. ಅವರು ಸಿದ್ಧ ಲೇಖಕರು. ಹೊಗಳಿಕೆ, ತಂಬಾಕು ಇವು ಯಾವುದೂ ಹಿಡಿಸದ ವ್ಯಕ್ತಿ. ಹಿಡಿದ ಕೆಲಸವನ್ನು ಪಟ್ಟು ಹಿಡಿದು ಮುಗಿಸುವ ಶ್ರದ್ಧೆ. ತನ್ನ ಕೆಲಸದ ಬಗ್ಗೆ, ನಯ, ನಾಜೂಕು, ನುಣುಪು, ಇವೆಲ್ಲವನ್ನೂ ಕಂಡುಕೊಳ್ಳುವ ಪ್ರವೃತ್ತಿ.

ಡಾ|| ಹಾ. ಮಾ. ನಾಯಕರ ಜನ್ಮಸ್ಥಳ ಮಲೆನಾಡಿನ ಸಿರಿಯ ಊರಾದ ತೀರ್ಥಹಳ್ಳಿಯ ಹಾರೋಗದ್ದೆ. ಅಲ್ಲಿಯ ಹೊಸ ಮನೆಯಲ್ಲಿ ಅವರ ಬಾಲ್ಯ, ವಿದ್ಯಾಭ್ಯಾಸ. ಮಲೆನಾಡಿನ ನಾಲೂರು, ಮೇಗರವಳ್ಳಿ, ತೀರ್ಥಹಳ್ಳಿ, ಶಿವಮೊಗ್ಗದಲ್ಲಿ ಇಲ್ಲಿಯ ಪ್ರಕೃತಿಯ ಸಿರಿಯ ಸೊಬಗನ್ನು ಉಂಡವ್ಯಕ್ತಿ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ. ಎ. ಆನರ್ಸ ಪದವಿ. ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಭಾಷಾ ಶಾಸ್ತ್ರದ ಬಗ್ಗೆ, ಎಂ. ಎ. ಪ್ರಥಮ ರ್‍ಯಾಂಕ್ ಹಾಗೂ ಸುವರ್ಣ ಪದಕ. ಅಮೇರಿಕೆಯ, ಇಂಡಿಯಾನಾ ವಿಶ್ವವಿದ್ಯಾನಿಲಯದಲ್ಲಿ ಭಾಷಾ ಶಾಸ್ತ್ರ ಹಾಗೂ ಮಾನವ ಶಾಸ್ತ್ರದ ಬಗ್ಗೆ ಪಿ. ಎಚ್. ಡಿ. ಪದವಿ. ಇದೆಲ್ಲವೂ ಹಾ. ಮಾ. ನಾಯಕರಿಗೆ ಜೀವನದಲ್ಲಿ ನಂಬಿಕೆ, ಶ್ರದ್ಧೆ, ಭಕ್ತಿ, ಸೇರಿ ಕೆಲಸ ಮಾಡಿದುದರಿಂದ ಸುಲಭವಾಗಿ ದೊರಕಿದ ವಿದ್ಯೆ.

ಇವರ ಗುರು ಕುವೆಂಪು, ಆತ್ಮೀಯ ಮಿತ್ರ, ದೇ.ಜ.ಗೌ. ಈ ಮೂವರ ಮಹಾಸಂಗಮ, ಮೈಸೂರು ವಿಶ್ವವಿದ್ಯಾನಿಲಯದ "ಮಾನಸ ಗಂಗೋತ್ರಿ". ಕುವೆಂಪು, ಬೇಂದ್ರೆ, ಗೋಕಾಕ್ ಇವರಲ್ಲಿ ನಾಯಕರ ನಂಬಿಕೆ. ಅವರ ಸಾಹಿತ್ಯ ಕೃತಿಗಳ ಬಗ್ಗೆ ವಿಶೇಷ ಗೌರವ ಅದೇ ದಾರಿಯನ್ನು ತಾವೂ ಸಹ ತುಳಿಯ ಬೇಕೆಂಬ ಪ್ರಯತ್ನ. ಅದರ ಸಾಧನೆಯ ಬಗ್ಗೆ ನಂಬಿಕೆ ಉಪಾಧ್ಯಾಯ ವೃತ್ತಿ ಯಲ್ಲಿ ಆಸಕ್ತಿ. ತುಮಕೂರು, ಶಿವಮೊಗ್ಗ ಕಾಲೇಜುಗಳಲ್ಲಿ ಅಧ್ಯಾಪಕ ಕೆಲಸ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಭಾಷಾ ಶಾಸ್ತ್ರದ ಸಹ ಪ್ರಾಧ್ಯಾಪಕ, ಮತ್ತೆ ಪುನಃ ಅಮೇರಿಕೆಯ ಪ್ರವಾಸ. ಇಂಡಿಯಾನಾ ವಿಶ್ವವಿದ್ಯಾನಿಲಯದಲ್ಲಿ ಸಂಶೋ ಧಕ ಸಹಾಯಕ, ಮತ್ತೆ ಪುನಃ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಆಗಮನ. ಅಲ್ಲಿ ಕನ್ನಡ ಹಾಗೂ ಭಾಷಾ ಶಾಸ್ತ್ರದ ಪ್ರಾಧ್ಯಾಪಕ. ಅಲ್ಲಿಂದ ಇಲ್ಲಿಯತನಕ ಮಾನಸ ಗಂಗೋತ್ರಿಯಲ್ಲಿ ಸ್ಥಿರವಾದ ನೆಲೆ.

ಹಾ. ಮಾ. ನಾಯಕರು, ಎಲೆಮರೆಯ ಕಾಯಿ, ವಿನಯಶೀಲ, ಸೌಮ್ಯ ಪುರುಷ, ಮಾತಿಗೆ ನಿಂತರೆ ಸರಾಗವಾಗಿ ಧುಮುಕುವ ನೀರಿನ ಓಗ ಹಂತ ಹಂತ ವಾಗಿ ಮೇಲಕ್ಕೆ ಏರುತ್ತಾ ಬಂದ ಅದೃಷ್ಟವಂತ. ಕನ್ನಡ ಹಾಗೂ ಇಂಗ್ಲೀಷ ಎರಡೂ ಭಾಷೆಯಲ್ಲಿ ಪ್ರಭುತ್ವವನ್ನಿಟ್ಟ ಮಾತನಾಡುವ ಛಲದ ಧೀರ. ಬೆಳ್ಳಗೆ, ಗುಂಡಾಗಿ, ಮುದ್ದಾಗಿ ಬೆಳೆದ ವ್ಯಕ್ತಿತ್ವ. ಯಾರೊಡನೆಯೂ ಜಗಳವಿಲ್ಲದೆ, ವಿಶ್ವವಿದ್ಯಾನಿಲಯದ ಒಂದು ಭಾಗವಾಗಿ ದುಡಿದರೂ ದಣಿವನ್ನು ಕಾಣದ ಜೀವ. ಹೇಗೆ ಒಳ್ಳೆಯ ಮಾತುಗಾರರೋ ಹಾಗೆಯೇ ಒಳ್ಳೆಯ ಸಾಹಿತ್ಯಕರ್ತ. ನಿಧಾನ ವಾಗಿ ಬರೆಯು ಬರೆಯುದನ್ನು ನಿಧಾನವಾಗಿ ಹೊರ ತರುವ ಅತ್ಯಂತ ಸಹನಶೀಲ. ಕನ್ನಡ ಮತ್ತು ಇಂಗ್ಲೀಷ ಎರಡೂ ಭಾಷೆಗಳಲ್ಲಿಯೂ ಹದಿನೈದಕ್ಕೂ ಹೆಚ್ಚು ಪುಸ್ತಕಗಳನ್ನು ಹೊರ ತಂದು ಭಾಷಾಶಾಸ್ತ್ರ, ಸಾಹಿತ್ಯ ವಿಮರ್ಶೆ, ಪ್ರಬಂಧ ಇತ್ಯಾದಿ, ಕ್ಷೇತ್ರಗಳಲ್ಲಿ ಸದ್ದುಗದ್ದಲವಿಲ್ಲದೆ ಕೆಲಸ ಮಾಡಿ, ಸಾರ್ಥಕತ್ವವನ್ನು ಪಡೆದ ಶ್ರಮಜೀವಿ.

"ಪ್ರಬುದ್ಧ ಕರ್ನಾಟಕ", "ಜಾನಪದ", "ಪುಸ್ತಕ ಪ್ರಪಂಚ", ಇದೆಲ್ಲದರ ಸಂಪಾದಕ ಮಂಡಳಿಯಲ್ಲಿ ಪ್ರವೇಶ. ಅಲ್ಲಿ ಅದರ ಉದ್ಧಾರಕ್ಕಾಗಿ ಎಡಬಿಡದ ಶ್ರಮ. ಕಲಕತ್ತೆಯಿಂದ ಹೊರಡುವ "ಫೋಕ್‌ಲೋರ್" ಪತ್ರಿಕೆಯ ಸಂಪಾದಕ ಮಂಡಳಿಗೆ ನೇಮಕ ಪುನಃ ಮೈಸೂರು ವಿಶ್ವವಿದ್ಯಾನಿಲಯದ "ಹಾಫ್ ಈಯರ್ಲಿ ಜರ್ನಲ್ ಆಫ್ ಮೈಸೂರು" ಇದರ ಸಂಪಾದಕರಾಗಿ ನೇಮಕ. ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯತ್ವ. "ಕನ್ನಡ ವಿಶ್ವಕೋಶ", "ಇಂಗ್ಲೀಷ ಕನ್ನಡ ಅರ್ಥಕೋಶ" ಇವರ ಪರಿಷ್ಕರಣ ಕಾರ್ಯ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆಯ ಸಲಹಾ

ಮುಂಡಲಿ ಈ ರೀತಿ, ಒಂದಲ್ಲ ಎರಡಲ್ಲ, ಎಲ್ಲವರಲ್ಲಿಯೂ ಸೈ ಎನಿಸಿಕೊಂಡ ಮಹಾ ಧೀರ.

ಡಾ|| ಹಾ. ಮಾ. ನಾಯಕರು, ನಮ್ಮ ನಾಡಿನ ಹಲವು ಪ್ರದೇಶಗಳನ್ನು ಸಂಚರಿಸಿದಂತೆ, ಅತಿ ಸುಲಭವಾಗಿ ಅಮೇರಿಕ, ಇಟಲಿ, ಫ್ರಾನ್ಸ್, ಸ್ವಿಡ್ಜರ್ ಲಂಡ್, ರುಮಾನಿಯ ಮುಂತಾದ ದೇಶಗಳನ್ನು ಅತ್ಯಂತ ಚಿಕ್ಕವಯಸ್ಸಿನಲ್ಲಿ ಸಂಚರಿಸಿ ಬಂದವರು. ಆ ಎಲ್ಲಾ ದೇಶಗಳಲ್ಲಿಯೂ, ಕನ್ನಡ ಸಾಹಿತಿಗೆ ಸಿಕ್ಕಿದ ಗೌರವ, ಸ್ವಾಗತ ಚಿರಸ್ಮರಣೀಯ; ಒಂದು ಮೈಲಿ ಗಲ್ಲು. ಮೈಸೂರು ವಿಶ್ವ ವಿದ್ಯಾನಿಲಯದಿಂದ ಹಿಡಿದು, ಅಮೇರಿಕಾ ಸರ್ಕಾರದ ಸ್ಟೇಟ್ ಇಲಾಖೆಯ ವಿದ್ಯಾರ್ಥಿ ವೇತನ, ಇಂಡಿಯಾನಾ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ವೇತನ, ಮುಂತಾದ ಹಲವು ಸೌಲಭ್ಯಗಳನ್ನು ಗಿಟ್ಟಿಸಿದ ಜಗಜಟ್ಟಿ. ರುಮಾನಿಯದಲ್ಲಿ ಕೂಡಿದ ಭಾಷಾ ವಿಜ್ಞಾನಿಗಳ ಅಗ್ರ ಸಮ್ಮೇಳನದಲ್ಲಿ ಭಾಗವಹಿಸಿದ ಭಾರತದ ಪ್ರತಿನಿಧಿ. ಸಾಹಿತ್ಯ, ವಿಮರ್ಶೆ, ಭಾಷಾ ವಿಜ್ಞಾನ, ಜಾನ ಪದ, ಭಾರತೀಯ ಸಾಹಿತ್ಯ ಇದೆಲ್ಲದರ ಬಗ್ಗೆ ವಿಶೇಷ ಆಸಕ್ತಿ. ಈ ವಿಚಾರ ಕುರಿತು ಕನ್ನಡ ಸಾಹಿತ್ಯದಲ್ಲಿ ಬೃಹತ್ ಗ್ರಂಥ ರಚಿಸಿದ ನಾಯಕ. ಇವರ ಸಾಹಿತ್ಯದಲ್ಲಿ ಮಲೆನಾಡಿನ ಸೊಬಗಿನ ವರ್ಣನೆ, ಶ್ರಮಜೀವಿ ರೈತನ ಪಾತ್ರ, ನೋವಿನ ಕತೆ, ಕನ್ನಡ ಸಾಹಿತ್ಯದಲ್ಲಿ ಶುದ್ಧತನವನ್ನು ತೋರಿಸಿದ ಸುಗುಣ ವ್ಯಕ್ತಿ.

ಇವರು ಎರಡು ಮಕ್ಕಳ ತಂದೆ. ಜನನ ನಿಯಂತ್ರಣವಾಗಲಿ, ಕುಟುಂಬ ಯೋಜನೆಯಾಗಲಿ ಇವರಿಗೆ ಹೊಸದಾಗಿ ಹೇಳಿ ಕೊಡಬೇಕಾದ ಪಾಠವಲ್ಲ. ಇವರ ಜೀವನದಲ್ಲಿ ಸಹಪಾಲಾಗಿ, ಸಾಹಿತ್ಯದಲ್ಲಿ ನೆರವಾಗಿ, ಉದ್ಯೋಗದಲ್ಲಿ ಬೆಂಬಲಿಗ ರಾಗಿ, ಬಾಳಸಂಗಾತಿಯಾಗಿ ಇರುವ ಧರ್ಮಪತ್ನಿ. ಚೊಕ್ಕವಾದ ಚಿಕ್ಕಮನೆ. ಕೂತರೆ, ನಿಂತರೆ, ಮಲಗಿದರೆ, ಎಲ್ಲದರಲ್ಲಿಯೂ ಸದಾ ಸುಖವನ್ನು, ಸುಲಭವಾಗಿ ಸಂಪಾದಿಸಿಕೊಂಡ ಅದೃಷ್ಟವಂತ. ಕುವೆಂಪುರವರ ಕೃಪಾಕಟಾಕ್ಷ, ಆಶೀರ್ವಾದ ಎಲ್ಲವೂ ಕೂಡಿ ಬಂದ ಸೌಭಾಗ್ಯ. ಮನೆಯ ಹೆಸರು "ಗೋಧೂಳಿ"

ಮಾನಪ್ಪನವರಿಗೆ ಸ್ನೇಹಿತರೊಡನೆ ಹರಟೆ ಹೊಡೆಯುವುದೆಂದರೆ, ಬಲುಪ್ರೀತಿ. ವಿಚಾರ ಧಾರೆಯಲ್ಲಿಯೂ ಅಷ್ಟೇ ಆಳವಾದ ಅಭಿಪ್ರಾಯ, ಹೊಸ ವಿಚಾರಗಳಿಗೆ ಆದ್ಯಗಮನ. ಅದರಲ್ಲಿ ಸೂಕ್ಷ್ಮದೃಷ್ಟಿ, ಕವನ, ಕಥೆ, ವಿಚಾರ, ಲೇಖನ, ಮುಂತಾದ ಹಲವು ರೂಪಗಳಲ್ಲಿ ಇವರ ಶಕ್ತಿ ವಿನಿಯೋಗವಾಗಿದೆ. ಅದರಲ್ಲಿಯೂ ಗುಣ ದೋಷಗಳನ್ನು ಇವರು ಗುರುತಿಸಬಲ್ಲರು. ಇವರ ಜೀವನದಲ್ಲಿ ಆಳವಾದ ಗೆಳೆತನದ ಸಾಧನೆ, ನಂಬಿದವರನ್ನೇ ನಂಬಿ ನಡೆಯುವ ಪರಮ ಭಕ್ತಿ. ಮೊದಲಿನ ನಾಸ್ತಿ

ಕತೆ, ಆನಂತರದ ವಾಸ್ತವಿಕತೆ ಮೂಡಿ ಜೀವನದಲ್ಲಿ ಹೊಸ ಮಾರ್ಗವನ್ನು ಕಂಡು ಕೊಂಡ ಮಾನಪ್ಪನವರಲ್ಲಿ ಪಾಂಡಿತ್ಯವೂ ಪ್ರಾವೀಣ್ಯವೂ ಎರಡೂ ಕೂಡಿಕೊಂಡಿದೆ. ಒಂದರಲ್ಲಿ ಒಂದು ಹಾಸು ಹೊಕ್ಕಾಗಿದೆ.

ಮಲೆನಾಡಿನ ಈ ಮುದ್ದುಕುವರ ವಿಶ್ವವಿದ್ಯಾನಿಲಯಕ್ಕೆ ಹೋಗಿ ಏನು ಮಾಡಿ ಯಾರು ? ಎಂಬ ಸಣ್ಣ ಪ್ರಶ್ನೆಗೆ ತಮ್ಮ ಸಾಧನೆಯಿಂದ ಅವರು ಬಹು ದೊಡ್ಡ ಉತ್ತರ ಕೊಟ್ಟಿದ್ದಾರೆ. ವಿವೇಕ ಹಾಗೂ ವಿವೇಚನೆಗಳನ್ನು ಚೆನ್ನಾಗಿ ಉಪಯುಕ್ತಗೊಳಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇವರದೇ ಪ್ರಧಾನ ಧ್ವನಿ. ಮುಂದೆ ಇವರದೇ ಅಲ್ಲಿ ಪ್ರಧಾನ ಪಾತ್ರವಾದರೂ ಆಗಬಹುದು.

ತಮ್ಮ ಸಜ್ಜನಿಕೆ, ಸುಸಂಸ್ಕೃತ ಗೆಳೆತನದಿಂದ ಇಡೀ ನಾಡಿನ ಜನರ ಪ್ರೀತಿಗೆ ಅರ್ಹರಾಗಿದ್ದಾರೆ. ಇವರ ಸೇವೆ ಹಾಗೂ ಸುಸಂಘಟಿತವಾದ ಪ್ರಯತ್ನದಿಂದ "ಮಾನಸ ಗಂಗೋತ್ರಿ" ಇಂದು ಕೀರ್ತಿಯ ಶಿಖರವನ್ನು ಮುಟ್ಟಿದೆ. ಅಲ್ಲಿ ನಡೆಯುತ್ತಿರುವ ಕನ್ನಡ ಭಾಷೆಯ ಪ್ರೋತ್ಸಾಹ, ಶಿಕ್ಷಣದ ಕ್ರಮ ಇತರೆ ವಿಶ್ವ ವಿದ್ಯಾನಿಲಯಕ್ಕೆ ಮಾದರಿಯಾಗಿದೆ. ಇವರು ಸಾಹಿತ್ಯದ ಗುಣಾವಗುಣಗಳನ್ನು ನ್ಯಾಯ ತಕ್ಕಡಿಯಲ್ಲಿ ಸದಾ ತೂಗುತ್ತಿರುವುದರಿಂದ ಇವರ ಜೀವನವೇ ಒಂದು ಅಪರಂಜಿಯಾಗಿದೆ. ಇವರ ಧ್ವನಿಗೆ ಇಡೀ ವಿಶ್ವವಿದ್ಯಾನಿಲಯವೇ ಧ್ವನಿಗೊಡು ತ್ತದೆ. ಅಲ್ಲಿ ನಡೆಯುವ ಪ್ರತಿಯೊಂದು ಕಾರ್ಯ ಚಟುವಟಿಕೆಯ ಹಿಂದೆ ಇವರ ಮಾರ್ಗದರ್ಶನವಿದೆ. ಕನ್ನಡ ಮಾಧ್ಯಮವನ್ನು ತರುವಲ್ಲಿ, ಮಾನಪ್ಪನವರು ಶ್ರಮ ವಹಿಸಿ ಕೆಲಸ ಮಾಡಿದ್ದಾರೆ. ಇವರ ಶ್ರಮ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಾರ್ಥಕತೆಯನ್ನು ಪಡೆದಿದೆ. ಮಾನಪ್ಪನವರು ಎಲ್ಲಿದ್ದರೂ ಸುಮ್ಮನೆ ಕೂರುವ ವ್ಯಕ್ತಿಯಲ್ಲ. ಯಾವಾಗಲೂ ಕೆಲಸ ಮಾಡುವ ವ್ಯಕ್ತಿ.



# ಶ್ರೀ ಜಿ. ಪಿ. ರಾಜರತ್ನಂ

ಸುಮಾರು ಹತ್ತು ವರ್ಷದ ಮಾತು. ಕರ್ನಾಟಕದ, ಕಲ್ಯಾಣನಗರವಾದ ಬೆಂಗಳೂರಿನ ಸುಂದರವಾದ ಲಾಲಬಾಗಿನ ಶತಮಾನೋತ್ಸವದ ಕಟ್ಟಡದಲ್ಲಿ ಶ್ರೀ ಸತ್ಯಸಾಯಿಬಾಬಾರವರ ಭಾಷಣವಿತ್ತು. ಇದರ ಅಂಗವಾಗಿ, ಅಖಂಡಭಜನೆ ನಡೆಯುತ್ತಿತ್ತು. ಸ್ವದೇಶಿ ಮತ್ತು ವಿದೇಶಿ ಜನರ, ಹತ್ತು ಸಾವಿರಕ್ಕೂ ಮೇಲ್ಪಟ್ಟ ಬೃಹತ್ ಜನರ ಸಮೂಹ. ಸಂಜೆ ನಡೆದ ದೊಡ್ಡ ಪ್ರಮಾಣದ, ಮಹಾಸಭೆಯಲ್ಲಿ ಶ್ರೀ ಜಿ. ಪಿ. ರಾಜರತ್ನಂರವರ ಭಾಷಣ. ಕುಳ್ಳ ದೇಹದ, ನರೆತ ಕೂದಲಿನ, ಈಗ ತಾನೆ ಕಡೆದಿಟ್ಟಂತಿರುವ, ಗುಂಡಾಕಾರದ, ಸುಂದರ ವ್ಯಕ್ತಿ. ಸುಮಾರು ಎರಡು ಗಂಟೆಗಳ ಕಾಲ ನಿರರ್ಗಳವಾಗಿ ಮಾತನಾಡಿದರು. ಅಂದಿನ ಸಭೆಗೆ ಬೆಂಗಳೂರು ವಿಶ್ವ ವಿದ್ಯಾನಿಲಯದ ಉಪಕುಲಪತಿ ವಿ. ಕೃ. ಗೋಕಾಕ, ಮತ್ತು ನಾ. ಕಸ್ತೂರಿಯವರು ಹಾಜರಿದ್ದರು. ರಾಜರತ್ನಂರವರ ಭಾಷಣವೆಂದರೆ, ಬೆಂಗಳೂರಿನ ಜನತೆಗೊಂದು ಮಹಾಹಬ್ಬ. ಕಣ್ಣು, ಕಿವಿ, ಮನ ಎಲ್ಲ ಇಂದ್ರಿಯಗಳೂ ಅವರ ಭಾಷಣವನ್ನು ಕೇಳುತ್ತವೆ. ಕಂಚಿನ ಕಂಠ, ಸಂಸ್ಕೃತ ಶ್ಲೋಕ, ಅದರ ಅರ್ಥ ವಿವರಣೆ ಜನಸಾಮಾನ್ಯರನ್ನು ಆಕರ್ಷಿಸುವ ಮುದ್ದಿನ ಮಾತು. ಇದು ರಾಜರತ್ನಂರವರ ಭಾಷಣದ ವೈಶಿಷ್ಟ್ಯ.

ಒಮ್ಮೆ ರಾಜರತ್ನಂರವರನ್ನು ಕಾಣಲು ಅವರ, ಮಲ್ಲೇಶ್ವರಂನಲ್ಲಿ ಇರುವ ಮನೆಗೆ ಮಿತ್ರರೊಡನೆ ಹೋದಾಗ, ಸಾಗರಕ್ಕೆ ಆಹ್ವಾನಿಸಿದ್ದೆ. ಅದಕ್ಕೆ ಅವರು ಹೇಳಿದ ಮಾತು ಇದು: "ನನಗೆ ಇನ್ನು ಆರು ತಿಂಗಳು ಕಾಲಾವಕಾಶ ಕಡಿಮೆ,

ಕರ್ನಾಟಕ ವಿಶ್ವ ವಿದ್ಯಾನಿಲಯದ ವತಿಯಿಂದ, ಹಲವು ಕಡೆ ಭಾಷಣ ಮಾಡಲು ಒಪ್ಪಿಕೊಂಡಿದ್ದೇನೆ. ನಾನು ಮಾಡಿದ ಭಾಷಣದ ಸಾರಾಂಶವನ್ನು ವಿಶ್ವ ವಿದ್ಯಾನಿಲಯದವರು ಪುಸ್ತಕ ರೂಪದಲ್ಲಿ ಪ್ರಕಟಿಸಲು ಒಪ್ಪಿಕೊಂಡಿದ್ದಾರೆ. ಅದರ ಸಿದ್ಧತೆಯಲ್ಲಿ ನಾನಿದ್ದೇನೆ. ಸಾಗರಕ್ಕೆ ಎಂದೂ ಬರಲು ಸಿದ್ಧನಿದ್ದೇನೆ, ಸಾಗರ ಸಾಹಿತ್ಯ, ನಾಟಕ, ಕಲೆಗೆ, ಉಗಮಸ್ಥಾನವೆನ್ನುವುದನ್ನು ನಾನು ಬಲ್ಲೆ. ಅನೇಕ ವಿದ್ವಾಂಸರನ್ನು ಆಹ್ವಾನಿಸಿ, ಗೌರವಿಸಿ, ಸತ್ಕರಿಸಿದ ವಿಷಯ ನನಗೆ ಗೊತ್ತು. ನನಗಾಗಿ, ನೀವು ಹಣ ವೆಚ್ಚ ಮಾಡಬೇಡಿ. ನನ್ನ ಎಲ್ಲಾ ಪುಸ್ತಕ ಈಗ ಪುನರ್ ಮುದ್ರಣವಾಗಿವೆ, ಅದನ್ನು ನೀವು ಕೆಲವನ್ನು ಪಡೆದು ವಿದ್ಯಾಸಂಸ್ಥೆಗಳಿಗೆ, ವಾಚನಾಲಯಕ್ಕೆ ಕೊಟ್ಟರೆ ಸಾಕು. ಅದರಿಂದ ಬರುವ ಹಣವೇ ನನಗೆ ತೃಪ್ತಿ ಕೊಡುತ್ತದೆ. ನನ್ನ ಪುಸ್ತಕ ಪಡೆದ ವಿದ್ಯಾಸಂಸ್ಥೆಗಳಲ್ಲಿ ನಾನು ತಪ್ಪದೆ ವಿದ್ಯಾರ್ಥಿಗಳನ್ನು ಕುರಿತು ಭಾಷಣ ಮಾಡುವೆ" ಎಂದರು. ಈ ಮಾತು, ಮಾರ್ಗದ ಮಾತಾಗಿತ್ತು; ಉತ್ತೇಜನೀಯವಾಗಿತ್ತು.

ರಾಜರತ್ನಂರವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕಳೆದ ಹಲವು ವರ್ಷಗಳು ಚಿರಸ್ಮರಣೀಯ. ಅಲ್ಲಿ ಕಟ್ಟಿದ ಕರ್ನಾಟಕ ಸಂಘ, ಆ ಮುಖದಲ್ಲಿ ಪ್ರಕಟವಾದ ಉತ್ತಮ ಕೃತಿಗಳು—ಇವೆಲ್ಲವೂ ರಾಜರತ್ನಂರವರ ಸಾಧನೆಯಿಂದ ನಡೆದುದು. ತಮ್ಮ ವಿನಯ, ಸರಳತೆ, ಸೌಜನ್ಯದಿಂದ ತಮ್ಮ ವಿದ್ಯಾರ್ಥಿಗಳನ್ನು ಕಂಡುದುದಲ್ಲದೆ, ವಿದ್ಯಾರ್ಥಿವೃಂದವನ್ನು ತೀವ್ರ ಪ್ರಭಾವದಿಂದ ಸೆರೆ ಹಿಡಿದಿದ್ದರು. ಮಲ್ಲೇಶ್ವರಂ ರಸ್ತೆಯಲ್ಲಿ ರಾಜರತ್ನಂ ಹೊರಟರೆಂದರೆ ಅವರ ಹಿಂದುಗಡೆ, ಹಳೆಯ ವಿದ್ಯಾರ್ಥಿಗಳ ಸಮೂಹ ಈಗಲೂ ಹಿಂಬಾಲಿಸುತ್ತದೆ. ರಾಜರತ್ನಂರವರ ಮಾತಿನ ಚಟಾಕಿ, ಹಾಸ್ಯದ ಹೊನಲು, ಎಲ್ಲರಿಗೂ ಪ್ರಿಯವಾದುದು.

ಗೌತಮ ಬುದ್ಧನ ವಿಚಾರ ಕುರಿತು ಕನ್ನಡದಲ್ಲಿ, ರಾಜರತ್ನಂರವರಷ್ಟು ಪ್ರಭುತ್ವವನ್ನಿಟ್ಟುಕೊಂಡು ಮಾತನಾಡುವವರು ಬಹು ವಿರಳ. ಬುದ್ಧನ ಕತೆಗಳನ್ನು ಬಹಳ ಸ್ವಾರಸ್ಯವಾಗಿ ಹೇಳುತ್ತಾರೆ. ಎಲ್ಲ ವರ್ಗದವರಿಗೂ ನಾಟುವಂತೆ ತುಂಬುತ್ತಾರೆ. ಬುದ್ಧ, ರಾಮ, ಕೃಷ್ಣ, ಏಸು ಹೀಗೆ ಹಲವು ಮಹಾತ್ಮರ ವಿಚಾರ ಕುರಿತು ಹಲವು ಕತೆಗಳನ್ನು ಬರೆದಿದ್ದಾರೆ. ಕವಿಗಳಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ವಿಮರ್ಶಕರಾಗಿ, ಈ ನಾಡ ನುಡಿಯ ಸೇವೆ ಮಾಡಿದ್ದಾರೆ. "ರತ್ನನ ಪದಗಳು" ಪದ್ಯ ಜನಸಾಮಾನ್ಯರ ಪ್ರೀತಿಗೆ ಪಾತ್ರವಾಗಿದೆ. 'ಹೆಂಡಕುಡುಕ ರತ್ನ'ನವನು ಈ ಹೆಸರನ್ನು ಸಾಮಾನ್ಯವಾಗಿ ತಮ್ಮ ಪದ್ಯಕ್ಕೆ ಉಪಯೋಗಿಸಿಕೊಳ್ಳುತ್ತಾರೆ! ಎಪ್ಪತ್ತು ದಾಟಿದರೂ ಚಿರ ಯುವಕರಂತೆ ಕಾಣುವ ರಾಜರತ್ನಂರವರನ್ನು ಅವರ ಮಿತ್ರರು, ಈಗಲೂ ಹಾಸ್ಯಕ್ಕಾಗಿ, 'ಏನು ರತ್ನಂಸೋರೆ', ಅನ್ನುತ್ತಾರೆ. ಬುದ್ಧನಿಂದ ರಾಮ…



ತನಕ ಇವರ ಲೇಖನಿ ಪ್ರಬುದ್ಧವಾಗಿ ಸಾಗಿದೆ. ಮಕ್ಕಳಿಗಾಗಿ "ಕಲ್ಲು ಸಕ್ಕರೆ" ಯಿಂದ ಹಿಡಿದು "ತುತ್ತೂರಿಯ" ತನಕ, ಹಿರಿಯರಿಗೆ ಗೌತಮ ಬುದ್ಧನಿಂದ ಗೀತೆಯ ತನಕ ಸಾಹಿತ್ಯ ಸಾಗಿದೆ! "ಗಂಡುಗೊಡಲಿ" ಯಿಂದ "ಗಧಾಯುದ್ಧ" ವನ್ನು ಸೃಷ್ಟಿಸಿದ ಮಹಾಮಹಿಮರಿವರು.

ಮಾಧ್ಯಮಿಕ ಶಾಲೆಯ ಉಪಾಧ್ಯಾಯರ ಮಗನಾಗಿ, ಅಯ್ಯಂಗಾರ್ ವಂಶಸ್ತರಾಗಿ, ರಾಜರತ್ನಂ ಅಯ್ಯಂಗಾರ್ ಎಂಬ ಹುಟ್ಟು ಹೆಸರನ್ನು ಪಡೆದು, ಬರುಬರುತ್ತ, ಜಾತಿಯ ಹೆಸರನ್ನು ತೆಗೆದುಹಾಕಿ, ಕೇವಲ ರಾಜರತ್ನಂ ಆಗಿ ಉಳಿದು ಜಾತ್ಯಾತೀತ ಹೆಸರನ್ನು ಅಂದೇ ಘೋಷಿಸಿದವರು. ಸಂಸಾರದಲ್ಲಿ ಅನೇಕ ಕಷ್ಟ ನಷ್ಟಗಳನ್ನು ಅನುಭವಿಸಿ, ಕೆಲಸಕ್ಕಾಗಿ ಅಲೆದರು. ಅಣ್ಣ ಮಾಸ್ತಿಯವರ, ಆಸರೆಯ ಮಾತು, ಇವರನ್ನು ಬಲು ಎತ್ತರಕ್ಕೆ ಕರೆದೊಯ್ದಿತು. ಸಾಹಿತ್ಯದ ಬೆಳವಣಿಗೆಗೆ ಅವಕಾಶವಾಯಿತು. "ಕನ್ನಡ ತಾಯಿ" ಮುನಿದು ಕೂತಾಗ ರಾಜರತ್ನಂರವರಿಂದ, "ನಕ್ಕಳಾ ತಾಯಿ" ಮೂಡಿತು. ಇವರ "ಗಂಡುಗೊಡಲಿ" ನಾಟಕ ಕರ್ನಾಟಕದ ವಿದ್ಯಾಸಂಸ್ಥೆಗಳು, ಸಂಘಸಂಸ್ಥೆಗಳು ಅಭಿನಯಿಸದೇ ಇರುವ ಸ್ಥಳವಿಲ್ಲ. ಬಸವೇಶ್ವರ, ಮುಹಮ್ಮದ್ ಪೈಗಂಬರನ ಬಗ್ಗೆಯೂ ಬರೆದರು. ಬರೆದುದಕ್ಕೆ ನಾಡಿನ ಜನತೆಯಿಂದ ಸೈ ಎನಿಸಿಕೊಂಡರು.

ತಮ್ಮ ನೋವು, ನಲಿವು, ಕಷ್ಟ, ಸುಖ, ಎಲ್ಲವೂ ಜನಕೋಟಿಗೆ ತಿಳಿಯಲೆಂದು "ಹತ್ತುವರ್ಷ"ವೆಂಬ ಆತ್ಮಕತೆಯನ್ನು ಬರೆದರು. ಈಗ ಅವರು "ಎಪ್ಪತ್ತು ವರ್ಷ"ವೆಂಬ ಗ್ರಂಥವನ್ನು ಬರೆದು, ತಮ್ಮ ಜೀವನದ ಸಾಧನೆಯನ್ನು ಇನ್ನೊಬ್ಬರಿಗೆ ಆದರ್ಶವಾಗಿ ಮಾಡಲು ಈ ಕೆಲಸವನ್ನು ಈಗ ರಾಜರತ್ನಂರವರು ಮಾಡಬೇಕಾಗಿದೆ. ಜನ ಇದನ್ನು ಈಗ ನಿರೀಕ್ಷಿಸುತ್ತಿದೆ.

ಹಿಂದಿನ ಕಾಲದಲ್ಲಿ ಇಂಗ್ಲೀಷ ಸಾಹಿತ್ಯವನ್ನೇ ಓದಿ ಮೆಚ್ಚಿ ಅದರ ಗುಣಾವಗುಣಗಳನ್ನೇ ಚರ್ಚಿಸಿ ತಲೆತೂಗುವುದರ ಜೊತೆಗೆ, ಕನ್ನಡ ಸಾಹಿತ್ಯವನ್ನು ಓದುವುದು ಬರೆಯುವುದು ಕನ್ನಡಿಗರಿಗೆ ಅಷ್ಟೊಂದು ಪ್ರಿಯವಾಗಿರಲಿಲ್ಲ. ಅಂತಹ ಕಾಲದಲ್ಲಿ ರಾಜರತ್ನಂರವರು ಕನ್ನಡದ ಸ್ಥಾನವನ್ನು ಕನ್ನಡಿಗರಿಗೆ ಪರಿಚಯಮಾಡಿಕೊಟ್ಟು, ತಮ್ಮ ಕೃತಿಗಳ ಜೊತೆಗೆ ಹಿರಿಯರಾದ ಮಾಸ್ತಿ, ಡಿ.ವಿ.ಜಿ, ವೆಂಕಣ್ಣಯ್ಯ, ಎಂ. ಆರ್. ಶ್ರೀ, ಬಿ. ಎಂ. ಶ್ರೀ ಮುಂತಾದವರ ಸಾಹಿತ್ಯವನ್ನು ಹೊತ್ತು ಮನೆಮನೆಗೂ ಕನ್ನಡ ಸಾಹಿತ್ಯ ಪ್ರಚಾರವನ್ನು ಮಾಡಿದುದರಿಂದ, ಕನ್ನಡದ ಬಗ್ಗೆ ಮಾತನಾಡುವ ಶಕ್ತಿ ಹಾಗೂ ಬರೆಯುವ, ಓದುವ ಬುದ್ಧಿ ಇಂದು, ಕನ್ನಡಿಗರಲ್ಲಿ ಬೆಳೆದಿದೆ, ಬೆಳೆಯುತ್ತಿದೆ.

ತಮ್ಮ ಮಾತಿಗೂ ಕೆಲಸಕ್ಕೂ ಅತಿ ಸಂಬಂಧವನ್ನು ಇಟ್ಟುಕೊಂಡು ರಾಜ ರತ್ನಂರವರು 'ನಾವು ಇನ್ನೊಬ್ಬರಿಗೆ ಉಪದೇಶಿಸುವ ವಿಚಾರದಲ್ಲಿ ಎಷ್ಟು ಜಾಗ ರೂಕರಾಗಿದ್ದರೂ ಸಾಲದು. ಉಪದೇಶ ಮಾಡಿದ ವಿಚಾರ, ನಮ್ಮ ನಿತ್ಯ ಜೀವನ ದಲ್ಲಿ ಆಚರಣೆಯಲ್ಲಿದ್ದು ಆದರ್ಶಮಾರ್ಗದ್ದಾಗಿರಬೇಕು. ಅದಿಲ್ಲದೇ ಪರೋಪದೇಶ ಪಾಂಡಿತ್ಯದಿಂದ ಯಾವ ಸಾಧನೆಯೂ ಆಗುವುದಿಲ್ಲ' ಎಂದು ನಂಬಿದ್ದಾರೆ. ರಾಜರತ್ನಂರವರ ಸಾಹಿತ್ಯದಲ್ಲಿ ಎಷ್ಟೊಂದು ಸ್ವಚ್ಛತೆ ಇದೆಯೋ ಅಷ್ಟೇ ಸ್ವಚ್ಛತೆ ಅವರ ಜೀವನದ ಪ್ರತಿಯೊಂದು ಹೆಜ್ಜೆಯಲ್ಲಿಯೂ ಇದೆ.

ದಿವಂಗತ ಕೈಲಾಸಂರವರು ಬದುಕಿದ್ದಾಗ ಅವರೊಡನೆ, ಕನ್ನಡ ಸಾಹಿತ್ಯದ ಅಳಿವು—ಉಳಿವಿನ ಬಗ್ಗೆ ಆಗಾಗ ಚರ್ಚಿಸುತ್ತಿದ್ದುದುಂಟು. ಕೈಲಾಸಂರವರ ಸಾಹಿತ್ಯ ಕನ್ನಡ ಜನತೆಗೆ ಎಷ್ಟು ಪ್ರಿಯವಾಗಿತ್ತೋ ಅಷ್ಟೇ ಏಕೆ, ಅದಕ್ಕೂ ಹೆಚ್ಚಿನ ಪ್ರಿಯ ರಾಜರತ್ನಂರವರದ್ದು. ಅವರ ನಾಟಕ ಕುರಿತು, ವಿಮರ್ಶೆ ಮಾಡಿ ದ್ದಾರೆ. ಓದಿದ್ದಾರೆ, ಆಡಿ ತೋರಿಸಿದ್ದಾರೆ. ಕೇವಲ ತಮ್ಮ ಕೃತಿಗಳೇ ಮೇರು ಕೃತಿಯೆಂದು, ಬೀಜ ತಟ್ಟಿಕೊಳ್ಳುತ್ತಿರುವ ಇಂದಿನ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಬೇರೊಬ್ಬರ ಕೃತಿಗಳನ್ನು ಓದಿ ಮೆಚ್ಚುವ ವಿಶಾಲ ಹೃದಯ ಇನ್ನೊಂದು ಸಾಹಿತಿ ಗಿರುವುದು ವಿರಳ. ಅದನ್ನು ಸಾಧಿಸಿದವರು ರಾಜರತ್ನಂರವರು.





# ಶ್ರೀ ಸೂರ್ಯನಾರಾಯಣ ಚಡಗ

ಸೂರ್ಯನಾರಾಯಣ ಚಡಗ ಎನ್ನುವ ಹೆಸರು, ಕರ್ನಾಟಕದಲ್ಲಿ ಬಹು ಜನಪ್ರಿಯತೆ ಗಳಿಸಿದ ಹೆಸರು, ಸಾಹಿತ್ಯ ಕ್ಷೇತ್ರದಲ್ಲಿ ಈ ಹೆಸರಿನ ಒಂದು ಮೈಲಿಗಲ್ಲು. ತರುಣ ಲೇಖಕರಲ್ಲಿ ಎದ್ದು ಕಾಣುವ ವ್ಯಕ್ತಿ.

ಇವರ ಜನ್ಮಸ್ಥಳ ದಕ್ಷಿಣ ಕನ್ನಡ ಜಿಲ್ಲೆಯ ಕೋಟೇಶ್ವರ.

ಈಗ ಹಲವು ವರ್ಷಗಳಿಂದ ಕರ್ನಾಟಕದ ಕಲ್ಯಾಣ ನಗರವಾದ ಬೆಂಗಳೂರಿನಲ್ಲಿ ವಾಸ, ಅಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ದುಡಿಮೆ.

ಜನರನ್ನು ಆಕರ್ಷಿಸುವ ವ್ಯಕ್ತಿತ್ವ, ಸಹಜತೆ, ಸರಳತೆ, ವಿನಯತೆ ಇದೆಲ್ಲವೂ ಒಂದೇ ಕಡೆ ಸಂಗಮ.

ಕಳೆದ ಮೂವತ್ತು ವರ್ಷಗಳಿಂದ ನಿರಂತರ ಸಾಹಿತ್ಯ ಸೇವೆ. "ರತ್ನ ಪಡೆದ ಭಾಗ್ಯ" ಇವರ ಮೊದಲ ಕೃತಿ, ಮೂವತ್ತಕ್ಕೂ ಹೆಚ್ಚು ಕಾದಂಬರಿ ರಚನೆ.

ಎಲ್ಲದರಲ್ಲೂ ಹೊಸತನ, ಆದರ್ಶ ಜೀವನದ ಪ್ರಭಾವ, ಸಾಮಾನ್ಯ ಕುಟುಂಬ ವರ್ಗದ ಚಿತ್ರಣ, ಬರವಣಿಗೆಯಲ್ಲಿ ಶೀಲತೆ, ಮಕ್ಕಳಿಂದ ವೃದ್ಧರ ತನಕ, ಮುತ್ತೈದೆಯರಿಂದ ವಿಧವೆಯರ ತನಕ ಎಲ್ಲರೂ ಓವ ಬಯಸುವ ಸಾಹಿತ್ಯ ಚಡಗರದು.

ದಗಲೆ ಪಾಯಿಜಾಮಿನ ಉದ್ದನೆಯ ಬಿಳಿಯ ವ್ಯಕ್ತಿ ಸದಾ ಮಾತು, ಮಾತಿನಲ್ಲಿ ಮಾಧುರ್ಯ, ಸ್ನೇಹ ಪರತೆ. ಹಿಂದಿನ ಕಹಿ ಅನುಭವಗಳು ನೆನ ಪಾದಾಗಲೆಲ್ಲ, ಹೊಸ ಹೆಜ್ಜೆ ಇಡುವಾಗ ಜಾಗರೂಕತೆ. ಜೀವನದಲ್ಲಿ ಕಹಿ ಮತ್ತು ಸಿಹಿ, ಎರಡರ ಅನುಭವ, ಅದರಿಂದ ಜೀವನದಲ್ಲಿ ಮುಂದಿನ ಆಸಕ್ತಿಗಾಗಿ ಕಾತುರ.

ಇವರ, "ಹೆಣ್ಣು-ಹೊನ್ನು-ಮಣ್ಣು" ಕಾದಂಬರಿ, ನಿಸರ್ಗದ ನೈಜ ಚಿತ್ರಣ ವನ್ನು ರೂಪಿಸುವ ಉತ್ತಮ ಕೃತಿ.

"ಮನೆ ನಿನ್ನದು-ಮನ ನನ್ನದು" ಕೃತಿಯಲ್ಲಿ ಸಮಾಜದಲ್ಲಿ ನಡೆಯುವ ಅನೀತಿಯ ಪ್ರತಿಬಿಂಬ, ಹೊಸ ವಿಧಾನದ ಬಳಕೆ.

"ಸೀಮಂತಿನಿ", "ಮಧುರ ಮೈತ್ರಿ", "ಪದ್ಮ ಸರೋವರ" ಇವುಗಳಿಗೆ ಸಾಹಿತ್ಯ ಕ್ಷೇತ್ರದ ಉತ್ತಮ ಕೃತಿಗಳ ಸಾಲಿನಲ್ಲಿ, ಮೊದಲ ಸ್ಥಾನ.

"ಜರತಾರಿ ಕುಪ್ಪಸ"ದಿಂದ "ಸ್ವರ್ಗದ ಬಾಗಿಲ" ತನಕ ಇವರ ಸಾಹಿತ್ಯ ನಡೆದು ಬಂದಿದೆ.

ಚಡಗರು, ಸಾಹಿತ್ಯ ಕ್ಷೇತ್ರದಲ್ಲಿ ಮಾಡಿರುವ ಕೆಲಸ ಅಪರಿಮಿತ, ಮಾಡ ಬೇಕೆಂಬ ಆಶೆ ಬಹಳಷ್ಟು, ಸಾಹಿತ್ಯದ ಅಭಿವೃದ್ಧಿಗಾಗಿ ಸದಾ ಪ್ರಯತ್ನ. ಆ ಮುಖದಲ್ಲಿ ವಿಸ್ತಾರವಾದ ಹಲವು ಕಾರ್ಯಕ್ರಮ.

ಕಾರಂತರ ದಾರಿಯಲ್ಲಿ ಕೃತಿಗಳ ರಚನೆ, ರಾಜರತ್ನಂರವರ ಆದರ್ಶದಲ್ಲಿ ಬೆಳವಣಿಗೆ, ಅ.ಸ.ಕೃರವರ ಪ್ರೋತ್ಸಾಹ, ಇದೆಲ್ಲವೂ ಚಡಗರಿಗೆ, ಸುಲಭವಾಗಿ ದೊರಕಿದ ಮಹಾ ದಾರಿ.

ಶೀಲ, ಅಶ್ಲೀಲತೆ, ವಾದ, ವಿವಾದ ಇದಾವುದೂ ಚಡಗರಿಗೆ ಹಿಡಿಸದ ಮನೋಭಾವ. ಶೀಲ, ಪ್ರಗತಿಶೀಲ ಇದಕ್ಕೆ ಹೊಂದಾಣಿಕೆ. ಪ್ರಚಾರಕ್ಕೆ ಹಿಗ್ಗದೆ ಅಪಪ್ರಚಾರಕ್ಕೆ ಕುಗ್ಗದೆ ಮುಂದುವರಿಯುವ ಮನೋಧರ್ಮ.

ಕೈಗೆ ನಿಲುಕಿದಷ್ಟು ಕೆಲಸಮಾಡಿ, ಅದರಿಂದ ಸಂತೃಪ್ತಿ ಪಡೆಯುವ ಕುಶಲತೆ, ರಾಜಕೀಯದಲ್ಲಿ ಗುಂಪು ಇರುವಂತೆ ಸಾಹಿತ್ಯದಲ್ಲಿಯೂ ಗುಂಪುಗಳಿದ್ದರೆ ಅದರಿಂದ ಬಹುದೂರ. ಎಲ್ಲರಲ್ಲಿಯೂ ಸಮಾನತೆ, ಸಮಭಾವದಿಂದ ಇರುವ ವಿಶೇಷ ಗುಣ.

ಚಡಗರು, ಸಾಹಿತ್ಯದಲ್ಲಿ ಮಾಡಿರುವ ಕೆಲಸ ದೊಡ್ಡದು, ವಿವಿಧ ಕತೆಗಾರರ, ಕೃತಿಗಳನ್ನು ಸಂಗ್ರಹಿಸಿ, ಅದರ ಸಂಪಾದಕರಲ್ಲಿ ಒಬ್ಬರಾಗಿ "ದಿಗಂತ" "ಕಾಮಧೇನು" "ಸುಹಾಸ" ಗ್ರಂಥ ಹೊರ ತಂದಿರುವುದು ಸಾಹಸದ ಕೆಲಸ. ಇತ್ತೀಚೆಗೆ ಬಂದಿರುವ "ನಗೆನಂದನ" ಹಾಸ್ಯ ಸಾಹಿತ್ಯದಲ್ಲಿ ಬಹು ದೊಡ್ಡ ದಾರಿ.

ದಕ್ಷಿಣ ಕನ್ನಡ ಜಿಲ್ಲೆಯ, ಬರಹಗಾರರ ಪರಿಚಯದ ಬೃಹತ್ ಹೊತ್ತಿಗೆ ತಂದು ಆ ಜಿಲ್ಲೆಯ ಲೇಖಕರ ಪರಿಚಯ ಮಾಡಿ ಕೊಟ್ಟಿರುವುದು ಸೂರ್ಯನಾರಾಯಣ ಚಡಗರ ವಿಶಾಲತೆಯನ್ನು, ಸಹೃದಯತೆಯನ್ನು ತೋರಿಸುತ್ತದೆ.

ಸಾಹಿತ್ಯದಲ್ಲಿ ಹಂತ ಹಂತವಾಗಿ ಏರುತ್ತಾ ಬಂದ ಚಡಗರು, ಇನ್ನೂ ಎತ್ತರಕ್ಕೆ ಹೋಗುವ ದಾರಿಯಲ್ಲಿದ್ದಾರೆ. ಕಡಲ ತೀರದಲ್ಲಿ ಹುಟ್ಟಿ ಕಡಲ ಭಾರ್ಗವರ ಮಾರ್ಗದಲ್ಲಿ ಬೆಳೆದು, ಕುಡಿಯೊಡೆದು ಘಟ್ಟದ ಮೇಲೂ ಹಬ್ಬಿರುವ ಇವರ ಕೀರ್ತಿ ಪತಾಕೆಗೆ, ಬೆಂಗಳೂರಿನ ಮಲ್ಲೇಶ್ವರಂ ಕೇಂದ್ರ. ನಡೆಯಂತೆ, ನುಡಿಯಂತೆ, ನಡೆ, ಇವೆರಡೂ ಚಡಗರಿಗೆ ಕರತಲಾಮಲಕ.

"ನಗೆನಂದನ"ದ ಮುಂದಿನ ಭಾಗ "ಸುಹಾಸ" ಸಾವಿರ ಪುಟಗಳ ಬೃಹತ್ ನಗೆಬರಹ ಪ್ರಕಟವಾಗಿದೆ. ಇನ್ನೂರು ಕನ್ನಡ ಕವಿಗಳ ಬೃಹತ್ ಕವನ ಸಂಕಲನವನ್ನು ಪ್ರಕಟಿಸುವ ಯೋಜನೆ, ಒಂದು ಲಕ್ಷ ರೂಪಾಯಿ ನಿಧಿಯನ್ನು ಕನ್ನಡಿಗರಿಂದ ಸಂಗ್ರಹಿಸಿ ಆ ಹಣದಿಂದ ಬರುವ ಬಡ್ಡಿಯಿಂದ ಪ್ರತಿವರ್ಷ ಕನ್ನಡದ ಹಿರಿಯ ಸಾಹಿತಿಗಳಿಗೆ, ನಿಧಿ ಅರ್ಪಿಸಿ ಗೌರವಿಸುವ ಪವಿತ್ರ ಕೆಲಸ. ಇದು ಚಡಗರಲ್ಲಿ ಸದಾ ಹೊಳೆಯುವ ಸದ್ಭಾವನೆ, ಸತ್ಕಾರ್ಯ. ಶ್ರೀ ಚಡಗರು, ಚಲನಚಿತ್ರ ಪ್ರಪಂಚದಲ್ಲೂ ಇರುವ ವ್ಯಕ್ತಿ. ಹಲವು ಕಾದಂಬರಿಗಳು ಚಲನಚಿತ್ರವಾಗಿವೆ.

ಚಡಗರ ಬರಹವು, ಕೃಷ್ಣಮೂರ್ತಿ ಪುರಾಣಿಕರ ಬರಹಕ್ಕೆ ಅತಿ ಹತ್ತಿರದ ಹೋಲಿಕೆ. ಅವರ ಬರಹದಲ್ಲಿ ಬರುವ ಪಾತ್ರಗಳ ನೈಜತೆಗೂ ಇವರ ಬರಹದಲ್ಲಿ ಬರುವ ಪಾತ್ರಗಳ ಪುಷ್ಟಿಗೂ ನಿಕಟ ಸಂಬಂಧ. ಇವರಿಬ್ಬರ ಸಾಹಿತ್ಯವನ್ನು, ಸುಮಂಗಲಿಯರ ಸಾಹಿತ್ಯವೆಂದು ಹೇಳುವ ಜನರೂ ಉಂಟು.

ಇವರ ಕಾದಂಬರಿಗಳು ಓದುವ ವಾಚಕರಿಗೆ, ಸಚ್ಚಾರಿತ್ರ್ಯ, ಸದ್ಗುಣಗಳ ದಾರಿದೀಪ, ಇದು ಸರಿಯಿಲ್ಲವೆನ್ನುವುದು ಅರ್ಥ ರಹಿತ, ತಮ್ಮ ಬರಹ, ಇನ್ನೊಬ್ಬರ ಮೇಲೆ ಉತ್ತಮ ಪರಿಣಾಮ ಬಿರಬೇಕು, ಆದರಿಂದ ಅವರ ನಿತ್ಯ ಜೀವನ ವಲ್ಲಿ ಬಹು ದೊಡ್ಡ ಸಾಧನೆಯ ಮಾರ್ಪಾಡಾಗಬೇಕು ಎಂಬುದು ಚಡಗರ ಹೆಬ್ಬಯಕೆ.

ಇಂದು ಜೀವನ ಬಹಳಷ್ಟು ಕೃತಕವಾಗಿದೆ. ಇದಕ್ಕೆ ನಮ್ಮ ಜನರಲ್ಲಿ, ಉನ್ನತ ಅಭಿಪ್ರಾಯದ ಕೊರತೆಯೇ ಕಾರಣ. ಕೀಳು ಅಭಿಪ್ರಾಯಗಳಿಗೆ, ನಮ್ಮ ಜನರು ಬಹಳಷ್ಟು ಜೋತು ಬಿದ್ದಿರುವುದೂ ಇನ್ನೊಂದು ಕಾರಣವೆನ್ನುತ್ತಾರೆ.

ಜನರ ಮಧ್ಯದಲ್ಲಿ ಬೆಳೆದು, ಜನರ ಮಧ್ಯದಲ್ಲಿ ನಿಂತಿರುವ ಚಡಗರು, ಜನತಾ ಲೇಖಕರು ಎಂಬುದು ಒಪ್ಪುವ ಮಾತು. ಇಷ್ಟು ಹೇಳಿದರೆ ಇಲ್ಲಿಗೆ ಸಾಕು.



# ಶ್ರೀಮತಿ ಗೀತಾ ಕುಲಕರ್ಣಿ

ಕನ್ನಡದ ಕೆಲವೇ ಜನ ಲೇಖಕಿಯರಲ್ಲಿ ಶ್ರೀಮತಿ ಗೀತಾ ಕುಲಕರ್ಣಿಯವರ ಸ್ಥಾನ ವೈಶಿಷ್ಟ್ಯ ಪೂರ್ಣವಾಗಿದೆ. ಮುಂಬೈ ನಗರದಲ್ಲಿ ಹುಟ್ಟಿ, ದಕ್ಷಿಣ ಕನ್ನಡದಲ್ಲಿ ಬೆಳೆದ ಕನ್ಯೆ ಇವರು. ಇವರ ತಂದೆ ಕೆ. ಟಿ. ಆಳ್ವರವರು ಉತ್ತಮ ಕಲಾವಿದರು. ದೇಶ ವಿದೇಶಗಳನ್ನು ಸುತ್ತಿ ಉತ್ತಮ ಅನುಭವ ಪಡೆದವರು. ಮುಂಬೈನಂತಹ ಮಹಾ ನಗರದಲ್ಲಿ ಉದ್ದಿಮೆದಾರರಾಗಿದ್ದ ವ್ಯಕ್ತಿ. ತಾಯಿ ಕಮಲ ಆಳ್ವ. ಅವರ ನಾಲ್ಕನೇ ಮಗಳೇ ಗೀತಾ.

ಇವರ ತವರುಮನೆಯ ಹೆಸರು ಅಹಲ್ಯ. ಚಿಕ್ಕಂದಿನಲ್ಲೇ ತಾಯಿ ತಂದೆಯರನ್ನು ಕಳೆದುಕೊಂಡ ತಬ್ಬಲಿ, ಅಜ್ಜಿಯ ಮಡಿಲಿನಲ್ಲಿ ಬೆಳವಣಿಗೆ. ಎಳೆತನದಲ್ಲೇ ಚುರುಕುತನ. ಸಾಹಿತ್ಯ ಕಲೆಯಲ್ಲಿ ಆಸಕ್ತಿ. ಎಲ್ಲರಲ್ಲಿಯೂ ಸಮಭಾವನೆಯಿಂದ ನಡೆದುಕೊಳ್ಳುವ ಪರಿಜ್ಞಾನ, ಚುರುಕು ಬುದ್ಧಿ. ಬಂಧುಗಳಿಂದ ಆಗಲೇ ಗುಣ ವಿಮರ್ಶೆ.

ಕಡಲ ತೀರದ ಭಾರ್ಗವ ಶಿವರಾಮ ಕಾರಂತರ ಪತ್ನಿ ಲೀಲಾ ಕಾರಂತ್ ಗೀತಾರ ಅಕ್ಕ. ಕಾರಂತರು ಲೀಲಾಳನ್ನು ಮದುವೆ ಆದದ್ದು ಆಕಸ್ಮಿಕ ಮತ್ತು ಆಶ್ಚರ್ಯಕರ. ಇದು ಸಮಾಜದಲ್ಲಿ ಹೊಸ ಪರಿವರ್ತನೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದೊಂದು ದೊಡ್ಡ ಕೋಲಾಹಲ. ಇದರಿಂದ ಜಗ್ಗದೆ ತಾಳ್ಮೆಗೆಡದೆ ಇಟ್ಟ

ಹೆಜ್ಜೆಯನ್ನು ಹಿಂಬಿಡದೆ ಕಾರಂತರು ಅಂದು ನಡೆದು ಬಂದದ್ದು ಅದೊಂದು ಸಾಹಸ ಯಾತ್ರೆ. ಇದರಿಂದ ಗೀತಾ ಕುಲಕರ್ಣಿಯವರ ಜೀವನದಲ್ಲಿ ಒಂದು ಹೊಸ ಅಧ್ಯಾಯ.

ಲೀಲಾ ಕಾರಂತರು ಮದುವೆಯಾದ ಒಂದು ವರ್ಷದಲ್ಲಿಯೇ ತಂದೆ ಆಳ್ವರ ನಿಧನ. ಗೀತಾ ಅಕ್ಕನೊಂದಿಗೆ ಭಾವನ ಮನೆಗೆ ಪ್ರವೇಶ. ಪುತ್ತೂರಿಗೆ ಈ ಪುಟ್ಟ ಹುಡುಗಿಯ ಆಗಮನ, ಖ್ಯಾತ ಸಾಹಿತಿಯ ಪರಿಸರದಲ್ಲಿ ಬೆಳೆಯುವ ಸದವಕಾಶ. ಇದರಿಂದ ಜೀವನದಲ್ಲಿ ಹೊಸತನ, ಮೆರಗು.

ನಾಡಿನ ಸಾಹಿತಿಗಳ ತಂಡ ಕಾರಂತರನ್ನು ಭೇಟಿ ಮಾಡಲು ಪುತ್ತೂರಿಗೆ ಆಗಾಗ ಬಂದಾಗ ಸಾಹಿತಿಗಳಿಗೆ ಕಾರಂತರಿಂದ ಗೀತಾಳ ಪರಿಚಯ, ಅವರ ಆದರಾತಿಥ್ಯಕ್ಕೆ ಇವರೇ ಮುಂದು. ಇವರ ಚುರುಕುತನ, ಹರಿತ ಬುದ್ಧಿ, ಹೃದಯ ವಂತಿಕೆಗಳು ನಾಡಿನ ಅನೇಕ ಜನ ಸಾಹಿತಿಗಳನ್ನು ಆಗಲೇ ಗುರುತಿಸಿದವು. ಸ್ವತಃ ಶಿವರಾಮ ಕಾರಂತರೇ ಗೀತಾರಿಗೆ ನೃತ್ಯಾಭ್ಯಾಸ, ಸಂಗೀತಾಭ್ಯಾಸ ಮಾಡಿಸಿದ ಪ್ರಥಮ ಗುರು. ಕಾರಂತರ ಕಲೆ, ಸಂಗೀತ, ನೃತ್ಯ ಇವರಿಗೂ ಪರಿಚಯವಾಯಿತು. ಅಭ್ಯಾಸವೂ ಸಾಗಿತು.

ಕಾರಂತರು ಕನ್ನಡದ ಚಲಿಸುವ ವಿಶ್ವಕೋಶ, ಅವರೊಂದು ವಿಶ್ವವಿದ್ಯಾನಿಲಯ; ಈ ಅದ್ಭುತ ವಿಶ್ವವಿದ್ಯಾನಿಲಯದಲ್ಲಿ, ಪುಟ್ಟ ಗೀತಾ ಒಬ್ಬ ವಿದ್ಯಾರ್ಥಿನಿ. ಯಾವ ಕಾಲೇಜಿನಲ್ಲೂ ಕಲಿಯಲು ಹೋಗದೆ ಕಾರಂತರ ನೆರಳ ತಂಪಿನಲ್ಲಿ ಬೆಳೆದ ಶ್ರೀಮತಿಯವರು, ಅವರ ಸ್ವಭಾವ, ನೀತಿ ಮತ್ತು ನಿಯಮಗಳಿಂದ ಪ್ರಭಾವಿತರಾದರು. ಭಾವ ಕಾರಂತರ, ಜೀವನದ ಮೌಲ್ಯಗಳನ್ನು ಚಿಕ್ಕಂದಿನಲ್ಲಿಯೇ ಗುರುತಿಸಿ ಕಾರಂತರ ಗ್ರಂಥ ಭಾಂಡಾರದಲ್ಲಿಯೇ ದಿನದ ಬಹುಕಾಲವನ್ನು ಕಳೆದರು. ಕನ್ನಡ ಸಾಹಿತ್ಯದ ಬಹುಪಾಲು ಗ್ರಂಥಗಳನ್ನು ಅಭ್ಯಾಸಿಸಿದರು. ಓದಿನಲ್ಲಿ ಮಗ್ನವಾದಾಗ ಅವರಿಗೆ ಹಗಲು ಇರುಳಿನ ವ್ಯತ್ಯಾಸವೇ ಗೊತ್ತಾಗುತ್ತಿರಲಿಲ್ಲ. ಹೀಗೆ ಕಡಲ ತೀರದಲ್ಲೊಂದು ಸಾಹಿತ್ಯದ ಕುಸುಮ ಅರಳಿತು.

ಭಾವ ಕಾರಂತರ ಅಭಿಲಾಷೆಯಂತೆ, ಧಾರವಾಡದ ಸಾಹಿತಿ, ಶೇಷಗಿರಿರಾವ್ ಕುಲಕರ್ಣಿಯವರೊಡನೆ ತಮ್ಮ ಹದಿನಾರನೇ ವರ್ಷದಲ್ಲಿ ಅಹಲ್ಯಾರ ಮದುವೆ. ಗೃಹಿಣಿಯಾಗಿ ಧಾರವಾಡಕ್ಕೆ ಆಗಮನ. 'ಗೀತಾ' ಎನ್ನುವ ಹೊಸ ಹೆಸರಿನೊಂದಿಗೆ ಹೊಸ ಊರಿನಲ್ಲಿ, ಹೊಸ ಮನೆಯ ಒಡತಿಯಾಗಿ, ಸಂಸಾರಿಕ ಜೀವನದ ಆರಂಭ. ಧಾರವಾಡದ ಸಾಹಿತ್ಯದ ಮಹಾ ಸಮುದ್ರದಲ್ಲಿ ಬೇಂದ್ರೆ, ಗೋಕಾಕ್ ವ. ಬಾ. ಕುಲಕರ್ಣಿ, ಬೆಟಗೇರಿ ಕೃಷ್ಣ ಶರ್ಮ ಮುಂತಾದವರ ನಿಕಟ ಪರಿಚಯ.

ಸಾಹಿತ್ಯದ ಬೆಳವಣಿಗೆಗೆ ಸದವಕಾಶ. ಪತಿ, ಕುಲಕರ್ಣಿಯವರ ಸಂಪೂರ್ಣ ಬೆಂಬಲ. ಇದೆಲ್ಲವೂ ಹಂತಹಂತವಾಗಿ ಗೀತಾ ಕುಲಕರ್ಣಿಯವರಿಗೆ ಲಭಿಸಿದ ಸುಲಭದ ಅದೃಷ್ಟ ವಂತಿಕೆ.

ಧಾರವಾಡದ ಲಲಿತ ಸಾಹಿತ್ಯ ಮಾಲೆಯ ಒಡೆಯರಾದ ದ. ಬಾ. ಕುಲ ಕರ್ಣಿಯವರ ಪ್ರೇರಣೆಯಿಂದಾಗಿ ಇವರ ಪ್ರಥಮ ಕಥೆ "ಅಂದು ಇಂದು" ಹೊರ ಬಂದಿತು. ಇದು ಆ ಕಾಲದ ನವೀನ ಮಾದರಿಯ ಹೊಸಕ್ಷಿತಿಜ. ಸಾಹಿತ್ಯದಲ್ಲಿ ಮೂಡಿಬಂದ ಪಾತ್ರಗಳ ರಚನೆ ಶ್ರೀನಿವಾಸ, ಆನಂದ ಕಂದ, ಆನಂದ ಇವರ ದಾರಿಯಲ್ಲಿ ಹೋಗುವ ಸಾಮರ್ಥ್ಯವನ್ನು ಪಡೆವಷ್ಟು ಪ್ರಭಾವಿಯಾಗಿತ್ತು. ಹಲವು ಕಡೆಯಿಂದ ಪ್ರೋತ್ಸಾಹವೂ ಕೂಡಿ ಬಂತು. ಶ್ರೀಮತಿಯವರ ಮೊದಲ ಕಥಾ ಸಂಕಲನ "ತೇಲಿ ಹೋದ ಮೋಡ". ಇದು ಕೂಡ ಜನಪ್ರಿಯತೆ ಗಳಿಸಿ ಮತ್ತೆ ಮತ್ತೆ ಬರೆಯಬೇಕೆಂಬ ಸಿದ್ಧತೆ ಮಾಡಿ ಸಾಹಿತ್ಯ ಸೇವೆಗೆ ಸದವಕಾಶ ದೊರೆಯಿತು. ದ. ಬಾ. ಕು. ಹೇಳುವಂತೆ, ಇವರ ಲೇಖನಿಯ ಬಲವೆಂದರೆ ಸಮಾಜದ ಸೂಕ್ಷ್ಮ ನಿರೀಕ್ಷಣೆ, ಸ್ವಾಭಾವಿಕವಾದ ಪಾತ್ರ ಪರಿಪೋಷಣೆ, ಉಚಿತ ನಿರೂಪಣೆ, ಮತ್ತು ಮುಖ್ಯವಾಗಿ ಹೃದ್ಯವಾದ ಕನ್ನಡ ಶೈಲಿ.

"ತೇಲಿ ಹೋದ ಮೋಡ" ಕಥಾ ಸಂಕಲನಕ್ಕೆ ವರಕವಿ, ಬೇಂದ್ರೆಯವರ ಮುನ್ನುಡಿ, ಮಾಸ್ತಿಯವರ ಮುತ್ತಿನಂತಹ ಮಾತು, ದ.ಬಾ.ಕು.ರವರ ಪ್ರೋತ್ಸಾಹ ದೊರೆತವು. ವಿಮರ್ಶಕರಿಂದ ಮುಕ್ತ ಹೊಗಳಿಕೆಯೂ ದೊರೆಯಿತು. ಇವರ "ಮೌನ ಸಂಧಾನ"ಕ್ಕೂ ಇದೇ ಪ್ರೋತ್ಸಾಹ. ಇವರ ಕಥಾವಸ್ತುವಿಗೆ ಹೆಣ್ಣೇ ಪ್ರಧಾನ ಪಾತ್ರ. ಆದ್ದರಿಂದ, ಇವರ ಕಥೆಗಳ ಜೀವಾಳವೆಲ್ಲ ಕರುಳಿನ ಸಂಬಂಧ, ಅಂತಃಕರುಣ, ಆತ್ಮೀಯತೆಗಳೇ ಆಗಿವೆ.

ಸಣ್ಣ ಕಥೆಗಳ ಲೇಖಕಿ ಕೊಡಗಿನ ಗೌರಮ್ಮನವರ ತೆರವಾದ ಸ್ಥಾನವನ್ನು ಶ್ರೀಮತಿ ಗೀತಾ ಕುಲಕರ್ಣಿ ಸಮರ್ಪಕವಾದ ರೀತಿಯಲ್ಲಿ ತುಂಬಿದ್ದಾರೆನ್ನಬಹುದು.

"ಕಂಬನಿ ಒರೆಸಿದ ಕೈ" ಇವರ ಮೊದಲ ಕಾದಂಬರಿ. ಪ್ರೀತಿಯೇ ಪ್ರಧಾನ ವಸ್ತುವಾಗಿರುವ ಈ ಕಾದಂಬರಿಯ ಶೈಲಿ ಸುಂದರವಾಗಿದೆ. ಇವರು ಆರಿಸಿದ ಪಾತ್ರಗಳು ವೈಶಿಷ್ಟ್ಯದಿಂದ ಕೂಡಿರುವುದರಿಂದ ಕಾದಂಬರಿಗೆ ಹೊಸ ಮೆರಗು ಬಂದಿದೆ. ಇವರ ಎರಡನೇ ಕಾದಂಬರಿಯಾದ, "ಸ್ವಪ್ನ ಮಂದಿರ"ದಲ್ಲಿ ಬರುವ ಪಾತ್ರಗಳು, ಅವರು ಎದುರಿಸುವ ವಿವಿಧ ರೀತಿಯ ಸಮಸ್ಯೆಗಳು, ತೊಂದರೆ, ತಾಕಲಾಟ, ದುಃಖ, ಮುಂತಾದವುಗಳಲ್ಲಿ ಓದುಗರು ಸಹ ಪಾಲುಗೊಳ್ಳುತ್ತಾರೆ.

ಇವರ "ದೀಪ ಮಿಂಚಿತು" ಕಾದಂಬರಿ ನವ್ಯರೂಪದ ಸಂಕೇತದಂತಿದೆ. ಇದು ಧಾರವಾಡ ಆಕಾಶವಾಣಿಯಿಂದ ಈಗಾಗಲೇ ಏಳು ಭಾಗವಾಗಿ ಪ್ರಸಾರವಾಗಿದೆ ಮತ್ತು ಪುಸ್ತಕ ರೂಪದಲ್ಲಿ ಹೊರ ಬಂದಿದೆ.

ಇವರ ಪತಿ, ಕುಲಕರ್ಣಿಯವರೂ ಸಹ ಉತ್ತಮ ಬರಹಗಾರರು. ಇವರ "ನನ್ನ ಗೀತೆಗಳು" ಎಂಬ ಕವನ ಸಂಕಲನ ಬಹು ಜನಪ್ರಿಯವಾದದು. ಶ್ರೀಮತಿಯವರು ತಮ್ಮ ಸಾಹಿತ್ಯ ಜೀವನದಲ್ಲಿ ಸ್ವಲ್ಪ ಅನುಭವವನ್ನು ಅನುಭವಿಸಿದರೂ ದೊರೆತದ್ದು ಅಪಾರ ಸಿಹಿ, ಅನನ್ಯ ಅನುಭವ, ಹೆಣ್ಣಿನ ಇಂದಿನ ಜಟಿಲ ಸಮಸ್ಯೆಗಳು, ಸುತ್ತುವರಿದ ಸುಪ್ತ ಆಸೆ ಆಕಾಂಕ್ಷೆಗಳು, ಸಮಾಜದಲ್ಲಿ ಹೆಣ್ಣಿಗಿರುವ ಸ್ಥಾನಮಾನಗಳ ಬಗ್ಗೆ ಯಾವಾಗಲೂ ಚಿಂತನೆ.

"ಸುವರ್ಣೆಯ ಗ್ರೀನ್‌ರೂಮ್" "ತುಳು ಜಾನಪದ ಗೀತೆಗಳು" "ಚದುರಂಗ ದಾಟ", "ಚಿಪ್ಪಿನೊಳಗಿದ್ದ ಮುತ್ತು", "ಸ್ವರ್ಗ ಮತ್ತು ನರಕ" ಮತ್ತು "ಶೋಭನ" ಇವು ಶ್ರೀಮತಿಯವರ ಕೆಲವು ಗ್ರಂಥಗಳಾಗಿವೆ.

ಒಂದು ಗಂಡು ಹಾಗೂ ಮೂರು ಜನ ಹೆಣ್ಣು ಮಕ್ಕಳ ತಾಯಿಯಾಗಿರುವ ಶ್ರೀಮತಿ ಕುಲಕರ್ಣಿಯವರು ಮಕ್ಕಳ ಪಾಲನೆ--ಪೋಷಣೆ, ಅಡಿಗೆ, ಅತಿಥಿ ಸತ್ಕಾರ ಮುಂತಾದ ಗೃಹ ಜೀವನದ ಅವಶ್ಯಕ ಕಾರ್ಯಕ್ರಮಗಳಲ್ಲಿಯೂ ಕುಶಲರಾಗಿದ್ದಾರೆ. ಧಾರವಾಡದ ಸಾರ್ವಜನಿಕ ಜೀವನದ ಪ್ರತಿಯೊಂದು ಪ್ರಮುಖ ಸಮಾರಂಭಗಳಲ್ಲಿಯೂ ಶ್ರೀಮತಿಯವರ ಸಕ್ರಿಯ ಪಾತ್ರ, ಸಮರ್ಥ ನಿರ್ದೇಶನ ಸದಾ ಇದ್ದೇ ಇರುತ್ತದೆ. ಶ್ರೀಮತಿಯವರ ಬಗ್ಗೆ ಡಾ। ಕರ್ಕಿಯವರು ಹೇಳುವಂತೆ "ಪದ್ಯವನ್ನು ಹೃದ್ಯವಾಗಿ, ಗದ್ಯರೂಪದಲ್ಲಿ ಹೇಳುವ ಕತೆಗಾರ್ತಿ" ಇವರು. ಶ್ರೀಮತಿ ಗೀತಾ ಕುಲಕರ್ಣಿ ಕರ್ನಾಟಕದ ಲೇಖಕಿಯರಲ್ಲಿ ಪ್ರಥಮ ಸ್ಥಾನ ಪಡೆದ ಮಹಿಳೆ.



# ಶ್ರೀ ಕ. ರಾ. ಕೃ.

ಕಳೆದ ಒಂದೂವರೆ ದಶಕದಿಂದ ಕನ್ನಡ ಜಾನಪದ ಸಾಹಿತ್ಯದ ಬಗ್ಗೆ ಬಹುಮುಖ ಸಂಶೋಧನೆ ನಡೆಸುತ್ತಾ ಬಂದವರು ಕ. ರಾ. ಕೃ. ರವರು. ಜಾನಪದ ಸಾಹಿತ್ಯದ, ಅನಂತಮುಖಗಳನ್ನು ಕನ್ನಡ ಜನತೆಗೆ ಪರಿಚಯ ಮಾಡಿಕೊಡಬೇಕೆಂಬ ಹಂಬಲದಿಂದ ನಲವತ್ತು ಕೃತಿಗಳನ್ನು ಹೊರತಂದು ಅಪೂರ್ವ ಸಾಹಸ ಮಾಡಿದ ಸಾಹಸಿ. ಜಾನಪದ ಸಾಹಿತ್ಯ ಸಂಗ್ರಹದಂತಹ ಕಷ್ಟಸಾಧ್ಯವಾದ ಕೆಲಸದಲ್ಲಿ ಕ್ರಿಯಾಶಕ್ತ ಎನಿಸಿಕೊಂಡ ಗಟ್ಟಿಗ.

ಕಷ್ಟನಷ್ಟವನ್ನು ಜೀವನದುದ್ದಕ್ಕೂ ಅನುಭವಿಸಿದರೂ, ಇಟ್ಟ ಹೆಜ್ಜೆಯನ್ನು ಹಿಂದಿಡದೆ, ಮುಂದೆ ಮುಂದೆ, ಬಹುಮುಂದೆ ನಡೆದುಬಂದ ಸಾಧಕ, ಜಾನಪದ ಸಾಹಿತ್ಯದ ಮಹಾಮಂತ್ರವನ್ನು ಕನ್ನಡಿಗರ ಹೃದಯಕ್ಕೆ ಮುಟ್ಟಿಸಿದ ಮಹಾ ಘೋಷಕ. ಜಾನಪದ ಸಂಗ್ರಹ ಕಾರ್ಯಕ್ಕಾಗಿ, ಮೈಸೂರು, ಕೊಡಗು, ತುಮಕೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಪ್ರವಾಸ. ಇದಕ್ಕಾಗಿ ಜೀವನದಲ್ಲಿ ಬಹು

ದೊಡ್ಡ ಪ್ರಯಾಸ, ಸಹಸ್ರ ಸಹಸ್ರ ಪುಟಗಳ ಸಂಗ್ರಹಣೆ. ಈ ಸಂಗ್ರಹ ಕಾಯಕದಲ್ಲಿ ಅವರು ಪಟ್ಟ ಪಾಡು ವರ್ಣನಾತೀತ. ಇಂಥದರಲ್ಲೂ ಅವರ ಸಾಧನೆಯು ಅದ್ಭುತ, ಅವರ ಉತ್ಸಾಹ ಶ್ರದ್ಧೆಗಳು ಶ್ಲಾಘನೀಯ.

ಕ. ರಾ. ಕೃ, ಕಷ್ಟಪಟ್ಟು ಸಂಗ್ರಹಿಸಿದ ಸಾಹಿತ್ಯವನ್ನು ಪ್ರಕಟಿಸುವುದರಲ್ಲಿ ಅದ್ವಿತೀಯರು, ಜೊತೆಗೆ, ಪ್ರತಿಯೊಂದು ಪದ್ಯಕ್ಕೂ ಒಂದು ಭಾವನಾತ್ಮಕವಾದ ಚಿತ್ರದ ಜೋಡಣೆ. ಹದಿನೈದು ವರ್ಷಗಳಲ್ಲಿ ನಲವತ್ತು ಕೃತಿಗಳನ್ನು ಸಂಗ್ರಹಿಸಿ ಹೊರತಂದು ಜಾನಪದ ಸಾಹಿತ್ಯಕ್ಕೆ ಈ ನಾಡಿನಲ್ಲಿ ಹೊಸ ರೂಪವನ್ನೇ ಕೊಟ್ಟ ಕ. ರಾ. ಕೃ. ರವರ ಆಶ್ಚರ್ಯಕರ ಕೆಲಸ ಪವಾಡಸದೃಶ್ಯವಾದುದು. ಈ ಪವಾಡದ ಹಿಂದೆ, ಪಟ್ಟ ಶ್ರಮ ವಿಪರೀತ. ಇವರ ಸಂಗ್ರಹದ ಮೊದಲ ಕೃತಿ "ಜೇನಹನಿಗಳು". ಇದು ಕ. ರಾ. ಕೃ. ರವರ ಶ್ರದ್ಧೆ, ನಿಷ್ಠೆಗಳ ಫಲವೇ ಆಗಿದೆ. ಇದರಿಂದ ಜಾನಪದ ಸಾಹಿತ್ಯದ ಹೊನಲು ಹರಿಯಲು, ಸಾಹಿತ್ಯ ಶ್ರೀಮಂತಗೊಳ್ಳಲು ಕಾರಣವಾಗಿದೆ. ಹಳ್ಳಿಯ ಹಾಡುಗಳನ್ನು ಕೂಡಿಹಾಕುವುದರಲ್ಲಿ, ತಮ್ಮ ಓದು-ಬರಹವನ್ನೇ ಬದಿಗೊತ್ತಿದ ಬಗ್ಗೆ ಮನೆಯಲ್ಲೂ, ಸಂಬಂಧಿಗಳಲ್ಲೂ ಅಸಮಧಾನ ಮೂಡಿದರೂ ಹಿಡಿದ ದಾರಿಯನ್ನು ಬಿಡದೆ ತಮ್ಮತನವನ್ನು ಕಂಡುಕೊಂಡ ಜಾಣ, ಕ. ರಾ. ಕೃ.

ಕ. ರಾ. ಕೃ. ರೈತ ಮನೆತನದಲ್ಲಿ ಹುಟ್ಟಿದವರು. ತಂದೆಗೆ ಹಿರಿಯ ಮಗ. ಮಗನ ಭವಿತವ್ಯದ ಬಗ್ಗೆ ಕ. ರಾ. ಕೃ. ರವರ ತಂದೆಯವರಿಗೆ ಇನ್ನಿಲ್ಲದ ಚಿಂತೆ. ಮಗನ ಅಭ್ಯುದಯಕ್ಕಾಗಿ ಸದಾ ಹಂಬಲ. ಕ. ರಾ. ಕೃ. ಬೆಳ್ಳನೆಯ ಉದ್ದವಾದ ವ್ಯಕ್ತಿ, ಸಾದಾ ಉಡುಪು, ಕೆದರಿದ ಕೂದಲು, ಸದಾ ಕಾಲ್ನಡಿಗೆಯಿಂದ ಪಯಣಿಸುವ ಸರಳ ವ್ಯಕ್ತಿ, ನಿತ್ಯ ಜೀವನದಲ್ಲಿ ನಿರಾಡಂಬರ, ಸರಳತೆ, ಸೌಜನ್ಯತೆಯ ಪ್ರತೀಕ. ಬಯಲು ಸೀಮೆಯ ತಂದೆ, ನೀಲಗಿರಿಯ ತಾಯಿ. ಜಾನಪದ ಸಾಹಿತ್ಯದತ್ತ ಮಗನ ಒಲವನ್ನು ಕಂಡುಕೊಂಡ ತಂದೆ-ತಾಯಿಗಳಿಂದ ಮಗನಿಗೆ ಬೆಂಬಲ, ಪ್ರೋತ್ಸಾಹ, ಆಶೀರ್ವಾದ.

ಕ. ರಾ. ಕೃ. ರವರು ತಮ್ಮ ಓದು ಮುಂದುವರಿಸಲು ಮೈಸೂರಿನಲ್ಲಿ ನೆಲೆಸಿದರು. ಓದಿನ ಜೊತೆಗೇ ಸಾಹಿತ್ಯದ ಪ್ರಕಟಣೆಯ ಪ್ರಾರಂಭ. 'ಕಾವ್ಯೋದಯ' ಗ್ರಂಥಮಾಲೆಯನ್ನು ಸ್ಥಾಪಿಸಿ, ಅದರ ಮೂಲಕ ಜಾನಪದ ಸಾಹಿತ್ಯ ಸಂಗ್ರಹದಲ್ಲಿ ನಿರತರಾದರು. ಓದಿಗಾಗಿ ಮನೆಯಿಂದ ತರಿಸಿದ ಹಣವನ್ನು ಪುಸ್ತಕ ಪ್ರಕಟಣೆಗಾಗಿ ವ್ಯಯ ಮಾಡಿದರು. ಇದರಿಂದ ವಿದ್ಯೆಗೆ ಶರಣು ಹೊಡೆಯಬೇಕಾಯಿತು. ಅವರು ವಿಶ್ವವಿದ್ಯಾನಿಲಯದ ಪದವೀಧರರಲ್ಲ ನಿಜ; ಆದರೆ ನೂರು

ಪದವೀಧರರು ಮಾಡಲಾರದ ಮಹತ್ಸಾಧನೆಯನ್ನು ಅವರು ಮಾಡಿ ತೋರಿಸಿದ್ದಾರೆ. ಕ. ರಾ. ಕೃ. ರವರು ಈ ಸಾಹಸದ ಕೆಲಸಕ್ಕೆ ಕೈ ಹಾಕದಿದ್ದರೆ, ಜಾನಪದ ಸಾಹಿತ್ಯ ಕ್ಷೇತ್ರವೇ ಬರಡಾಗುತ್ತಿತ್ತು ಎನ್ನ ಬಹುದೇನೋ! ಜಾನಪದ ಸಾಹಿತ್ಯದ ಸಂಗ್ರಹಣೆ ಬಗ್ಗೆ ಅ. ನ. ಕೃ., ತ. ರಾ. ಸು., ಡಿ. ಎಲ್. ನರಸಿಂಹಾಚಾರ್, ಕಾರಂತ, ಪ್ರಭುಶಂಕರ್, ಸಿ. ಡಿ. ನರಸಿಂಹಯ್ಯ ಮುಂತಾದವರಿಂದ ಮುಕ್ತ ಕಂಠದ ಹೊಗಳಿಕೆ.

ಸಮ್ಮೇಳನ, ಸಭೆಗಳಲ್ಲಿ ಕ.ರಾ. ಕೃರವರ ನೈಜ ಸೇವೆಯ ಪ್ರಸ್ತಾಪ, ಅವರ ಅಪೂರ್ವ ಸಾಹಸಕ್ಕೆ ಮೆಚ್ಚಿಗೆ. ನಾಡಿನ ಪತ್ರಿಕೆಗಳಿಂದ ಕ.ರಾ.ಕೃರವರ ಸಾಹಸ ಯಾತ್ರೆಗೆ ಬೆಂಬಲ. ಫಲಮಾತ್ರ ಕಂಡು ಬರಲಿಲ್ಲ. ಅಚ್ಚಾದ ಪುಸ್ತಕಗಳು ಮಾರಾಟವಾಗದೆ ರಾಶಿರಾಶಿಯಾಗಿ ಉಳಿದುಕೊಂಡವು. ಹಾಕಿದ ಹಣ ಕೈ ಸೇರುವಂತಿರಲಿಲ್ಲ. ಇವರ ಈ ಸಾಹಸದ ಕೆಲಸಕ್ಕೆ ಯಾವ ಸಂಘ ಸಂಸ್ಥೆಗಳ ನೆರವೂ ಕೂಡಿ ಬರಲಿಲ್ಲ. ಸರಕಾರದವರೂ ಈ ಕಡೆ ಗಮನ ಹರಿಸಲಿಲ್ಲ. ಆದರೂ ಎದೆಗುಂದದೆ ಕನ್ನಡದಲ್ಲಿರುವ ಹಾಡುಗಳನ್ನು ಇಂಗ್ಲೀಷಿಗೂ ಭಾಷಾಂತರಿಸಿ ಕನ್ನಡ ಜಾನಪದ ಸಾಹಿತ್ಯಕ್ಕೆ ವಿಶ್ವಮಾನ್ಯತೆಯನ್ನು ದೊರಕಿಸಿ ಕೊಡುವ ಉದ್ದೇಶದಿಂದ ಅದರ ಪ್ರಕಟಣೆಯನ್ನೂ ತಾವೇ ಹೊರಲು ಸಿದ್ಧರಾದರು. ತಮ್ಮ ಶಕ್ತಿ ಮೀರಿ ಈ ಕಾರ್ಯಕ್ಕೆ ಶ್ರಮಿಸಿದರು. ಆದರೆ ಇದರಿಂದಲೂ ಅವರಿಗೆ ನಿರಾಶೆಯೇ ಎದುರಾಯಿತು.

ಇಂಥ ನಿರಾಶಾದಾಯಕ ವಾತಾವರಣದಲ್ಲಿ ಪ್ರಪಂಚ, ಜನಪ್ರಗತಿ, ಗೋಕುಲ, ಪ್ರಜಾವಾಣಿ, ತಾಯಿನಾಡು ಮುಂತಾದ ಕನ್ನಡದ ಪ್ರಸಿದ್ಧ ಪತ್ರಿಕೆಗಳು, ಕ.ರಾ. ಕೃರವರ ಸಾಧನೆಯನ್ನು ಅಪಾರವಾಗಿ ಕೊಂಡಾಡಿದವು. ಸರ್ಕಾರ ಅವರ ಬಗ್ಗೆ ತಳೆದಿರುವ ಧೋರಣೆಯ ಬಗ್ಗೆ ಮೇಲಿಂದ ಮೇಲೆ ಲೇಖನಗಳನ್ನು ಪ್ರಕಟಿಸಿ ಕ.ರಾ.ಕೃರವರ ಸಾಹಸದ ಕತೆಯನ್ನು ಮನಕರಗುವಂತೆ ವರ್ಣಿಸಿದವು. ಇದರಲ್ಲಿ "ಪ್ರಪಂಚ" ಪತ್ರಿಕೆ ತನ್ನದೇ ಆದ ರೀತಿಯಲ್ಲಿ ಹೇಳಬಹುದಾದ ಮಾತನ್ನೆಲ್ಲಾ ಹೇಳಿತು.

ನಮ್ಮ ರಾಜ್ಯದಲ್ಲಿ ಏನೆಲ್ಲವೂ ನಡೆಯುತ್ತವೆ. ಆದರೆ ನಡೆಯಬೇಕಾದುದೊಂದೂ ನಡೆಯುವುದಿಲ್ಲ. ಕೋಟ್ಯಾಂತರ ರೂಪಾಯಿಗಳ ಸಾಹಿತ್ಯಿಕ ಶೈಕ್ಷಣಿಕ ಯೋಜನೆಗಳು ನಡೆಯುತ್ತವೆ. ಆದರೆ ಸ್ವಂತ ಪರಿಶ್ರಮ, ಸ್ವಂತ ಹಣವ್ಯಯಿಸಿ ಲೋಕ ಸಂಗ್ರಾಹ್ಯವಾದ ಜಾನಪದ ಗೀತೆಗಳನ್ನು ಸಂಪಾದಿಸಿ ಅಂದವಾಗಿ ಮುದ್ರಿಸಿ ಪ್ರಕಟಿಸಿ ಇನ್ನು ತೆಗೆದುಕೊಳ್ಳಿ ಎಂದು ಒಬ್ಬ ಸಾಹಿತಿ ಮುಂದೆ ಬಂದರೆ ಅವರ

ಪುಸ್ತಕ ಕೊಳ್ಳಲು ಅಥವಾ ಅಪ್ರಕಟಿತ ಕೃತಿಯ ಪ್ರಕಾಶನಕ್ಕೆ ಸಹಾಯ ಮಾಡಲು ನಮ್ಮ ರಾಜ್ಯದ ಶಿಕ್ಷಣ ಖಾತೆಯ ಬಳಿ ಹಣವಿಲ್ಲ. ವಾಚನಾಲಯಗಳಿಗೆ, ಗ್ರಂಥ ಖರೀದಿ ಮಾಡುವಂತೆ ಶಿಫಾರಸು ಮಾಡುವ ಔದಾರ್ಯವೂ ಇಲ್ಲ. ಕೇಂದ್ರ ಹಾಗೂ ರಾಜ್ಯ ಸರಕಾರಗಳ ಯಾವ ಸಾಂಸ್ಕೃತಿಕ ಸಂಘ ಸಂಸ್ಥೆಗಳೂ ಇವರ ಮಹತ್ಕಾರ್ಯಕ್ಕೆ ಸಹಾನುಭೂತಿ ತೋರಿಸುವ, ಸಹಾಯ ಪ್ರೋತ್ಸಾಹ ನೀಡುವ ಮನಸ್ಸು ಮಾಡಲಿಲ್ಲ.

ಕ.ರಾ.ಕೃರವರು ತಮಗೊದಗಿದ ಈ ನಿರಂತರ ನಿರಾಶೆಯನ್ನು ಹೃದಯ ಕರಗುವಂತೆ ವಿವರಿಸುತ್ತ, ಭೂಗರ್ಭ ಸಂಶೋಧನೆಗೆ ಕೇಂದ್ರ ಸರ್ಕಾರ ಎಷ್ಟು ವೆಚ್ಚ ಮಾಡುತ್ತಿಲ್ಲ? ಪ್ರಾಚೀನ ನಗರಗಳನ್ನು ಅಗೆದು ತೆಗೆಯುವುದು ಎಷ್ಟು ಪ್ರಾಮುಖ್ಯವೋ ಪ್ರಾಚೀನ ಗೀತೆಗಳನ್ನು ಹುಡುಕಿ, ಅಮಿತ ಸಹನೆಯಿಂದ ಕಲೆ ಹಾಕಿ ಸಂಶೋಧನೆ ಮಾಡುವುದೂ ಅಷ್ಟೇ ಪ್ರಾಮುಖ್ಯವೆಂಬುದು ನಮ್ಮ ಸರಕಾರಕ್ಕೆ ಏಕೆ ಗೊತ್ತಾಗಿಲ್ಲ? ಎಂದು ಕಳಕಳಿಯಿಂದ ಕೇಳುತ್ತಾರೆ.

ಕ. ರಾ. ಕೃ ಪರವಾಗಿ ಪತ್ರಿಕೆಗಳೆಲ್ಲ ಕೂಗೆಬ್ಬಿಸಿದಾಗ ಸರಕಾರದ ಕಣ್ಣು ಸ್ವಲ್ಪ ತೆರೆದುಕೊಂಡಿತು. ರಾಜ್ಯದ ಸಾರ್ವಜನಿಕ ವಾಚನಾಲಯಗಳಿಗೆ ಆ ಗ್ರಂಥಗಳ ಖರೀದಿಯ ಬಗೆಗೆ ಶಿಫಾರಸು ಮಾಡುವ ಆಜ್ಞೆ ಹೊರಡಿಸಲಾಯಿತು. ಆನಕ್ಕೂ ಅಧಿಕಾರಿಗಳಿಂದ ಹಲವು ವಿಘ್ನಗಳು, ಅಸೂಯೆ, ಮೇಲೇರಿ ಬಂತು. ರಾಜ್ಯದ ವಿಧಾನ ಸಭೆಯಲ್ಲಿ ಸಾಹಿತ್ಯದ ಬಗೆಗೆ, ಜಾನಪದದ ಬಗೆಗೆ ಅರಿವಿಲ್ಲದವರೂ ಮಾತನಾಡಿ ಶೀಲ, ಅಶ್ಲೀಲ ಪ್ರಶ್ನೆಯನ್ನು ತಂದು ನಾಡಿನಲ್ಲೆಲ್ಲ ಹುಯಿಲೆಬ್ಬಿಸಿದರು.

ಬಹು ಚಿಕ್ಕ ವಯಸ್ಸಿನಲ್ಲಿಯೇ ಬಹು ದೊಡ್ಡ ಕಾರ್ಯ ಮಾಡಿದ ಕ. ರಾ. ಕೃರವರಿಗೆ ಚಿತ್ರ ಶಿಲ್ಪಿಗಳಾದ ಆರ್. ಎಸ್. ನಾಯ್ಡು ಪಿ. ಆರ್. ತಿಪ್ಪೇಸ್ವಾಮಿಯವರ ಸಹಕಾರ ಕೂಡಿ ಬಂದುದು ವಿಶೇಷ ಸಂಗತಿ. ಸಹಸ್ರಾರು ಪದಗಳನ್ನು ತಮ್ಮ ಸ್ವಂತ ಟೇಪ್ ರಿಕಾರ್ಡುಗಳ ಮೂಲಕ ಸಂಗ್ರಹಿಸಿರುವುದು ಈಗಲೂ ಇದೆ. ಆಶೆ, ನಿರಾಶೆಗಳ ನಡುವೆ ಲಾಭ-ನಷ್ಟಗಳನ್ನು ಲೆಕ್ಕಿಸದೆ, ಕನ್ನಡದ ನಿಷ್ಠೆಯೊಂದನ್ನೇ ತಮ್ಮ ಬದುಕಿನ ಗುರಿಯಾಗಿಟ್ಟುಕೊಂಡು ಮುನ್ನುಗ್ಗುತ್ತಿರುವ ಕ. ರಾ. ಕೃ. ಕನ್ನಡದ ವ್ಯಕ್ತಿ ಮಾತ್ರವಲ್ಲ, ಅವರೊಬ್ಬ ಧೀಮಂತ ಶಕ್ತಿಯೂ ಹೌದು.



# ಶ್ರೀ ರಂ. ಶ್ರೀ. ಮುಗಳಿ

ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿದ್ದ ರಂ. ಶ್ರೀ. ಮುಗಳಿಯವರು ಸಿರಿಗನ್ನಡದ ಶ್ರೇಷ್ಠ ಸಾಹಿತಿಗಳು, ವಿಚಾರವಂತರು, ವಿನಯಶೀಲರು, ಸದ್ದುಗದ್ದಲವಿಲ್ಲದೆ ತಮ್ಮ ಕೆಲಸವನ್ನು ಸ್ವಚ್ಛವಾಗಿ ಮಾಡುವ ಶ್ರದ್ಧಾವಂತರು. ಕಳೆದ ಐವತ್ತು ವರ್ಷಗಳಿಂದ ಸಾಹಿತ್ಯ ಸೇವೆಯನ್ನು ನಿರಂತರ ಮಾಡಿದವರು. ಅಪ್ಪಟ ಅಪರಂಜಿಯಂಥವರು.

ಮುಗಳಿಯವರ ವ್ಯಕ್ತಿತ್ವವನ್ನು ಅಳೆಯುವುದು ಬಹು ಕಷ್ಟ. ಅಷ್ಟು ಪಾಂಡಿತ್ಯ-ಪ್ರತಿಭೆ ತುಂಬಿದೆ ಅವರಲ್ಲಿ. ಧಾರವಾಡದ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗಲೆ ೧೯೨೧ ರಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಪ್ರತಿ ಹಳ್ಳಿಗೂ, ಪ್ರತಿ ಮನೆಗೂ ಹೋಗಿ ಖಾದಿ ಪ್ರಚಾರ ಕೈಗೊಂಡು ಜನತೆಯಲ್ಲಿ ಹೊಸ ಹುರುಪು, ಹೊಸ ಚೈತನ್ಯವನ್ನು ತುಂಬಿದರು.

ಇದೇ ಸಮಯದಲ್ಲಿ ಅವರನ್ನು ಎರಡು ಸಮಸ್ಯೆಗಳು ಕಾಡಿದವು. ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆ? ಸಾಹಿತ್ಯದ ಅಭ್ಯಾಸವನ್ನು ಚೆನ್ನಾಗಿ ಅಳವಡಿಸಬೇಕೇ? ಈ ಎರಡೂ ಸಮಸ್ಯೆಗಳನ್ನು ಎದುರಿಸಬೇಕೆಂದು ನಿರ್ಧರಿಸಿದ ಮುಗಳಿ

ಯವರು ಸಾಹಿತ್ಯದ ಅಭ್ಯಾಸ ಹಾಗೂ ವಿದ್ಯಾಭ್ಯಾಸ ಎರಡನ್ನೂ ಒಮ್ಮೆಗೇ ಪ್ರಾರಂಭಿಸಿದರು.

ಶಾಲೆಯ ಕೊನೆಕೊನೆಯ ವರ್ಷಗಳಲ್ಲಿ ಗಳಗನಾಥರ ಕಾದಂಬರಿಗಳು ಮುಗಳಿಯವರಿಗೆ ಅತ್ಯಂತ ಪ್ರಿಯವಾದವು. ಇದರಿಂದ ಸಾಹಿತ್ಯಾಭ್ಯಾಸವೂ ಬಲಗೊಂಡಿತು. ಬಯಲು ಸೀಮೆಯಿಂದ ಮಲೆನಾಡಿನ ಪ್ರಾಂತ್ಯಕ್ಕೆ ಬಂದೊಡನೆಯೇ ಮಲೆನಾಡಿನ ಪ್ರಕೃತಿ ಸಿರಿಯ ಸೊಬಗನ್ನು ನೋಡಿ ಮಾರುಹೋದರು, ಮುಗ್ಧರಾದರು.

ಧಾರವಾಡಕ್ಕೆ ಬಂದ ಕೆಲವೇ ದಿನಗಳಲ್ಲಿ ಪ್ರಥಮವಾಗಿ ಸಂಪಾದಿಸಿರುವುದು ಜನತೆಯ ಗೆಳೆತನವನ್ನು. ಮೊದಲು ಬೇಂದ್ರೆಯವರ ಪರಿಚಯ ಹಾಗೂ ಗೆಳೆತನ ಇವರಿಗೊಂದು ಜೀವನದ ಊರುಗೋಲಾಯಿತು. ಜೀವನದಲ್ಲಿ ಹೊಸ ಬೆಳಕನ್ನು ಮೂಡಿಸಿತು. ಸಾಹಿತ್ಯದ ನಿರಂತರ ಅಭ್ಯಾಸ ಹಾಗೂ ಬರವಣಿಗೆಗೆ ಅನುಕೂಲ ವಾತಾವರಣ ದೊರಯಿತು. ರಸಿಕ ಮುಗಳಿಯವರು ಗಾರುಡಿಗ ಬೇಂದ್ರೆಯವರ ಪ್ರಭಾವಕ್ಕೂ, ಪಾಂಡಿತ್ಯಕ್ಕೂ ಒಳಗಾಗಿ ಅವರ ಉತ್ತೇಜನ, ಪ್ರೋತ್ಸಾಹ. ಸರಳತೆ, ಸೃಜತೆಯನ್ನು ಕಂಡುಕೊಂಡ ಮುಗಳಿಯವರಿಗೆ ಬೇಂದ್ರೆಯವರ ಗೆಳೆತನ ತುಂಬಾ ನೆರವಾಯಿತು. ಇವರಂತೆ, ಅಷ್ಟರಲ್ಲಿಯೇ 'ವಿನಾಯಕ'ರಾಗಿದ್ದ ಗೋಕಾಕರು ಮುಗಳಿಯವರ ವ್ಯಕ್ತಿತ್ವದ ಮೇಲೆ ತುಂಬಾ ಪ್ರಭಾವ ಬೀರಿದರು. 'ಕನ್ನಡವೇ ಪ್ರಾಣ, ಸಾಹಿತ್ಯವೇ ಸರ್ವಸ್ವ' ಎಂದು ನಂಬಿರುವ ಕೆಲವೇ ಜನರಲ್ಲಿ ಮುಗಳಿಯವರೂ ಒಬ್ಬರು.

ಎಂ.ಎ. ಮತ್ತು ಬಿ.ಟಿ. ಪರೀಕ್ಷೆಗಳಲ್ಲಿ ತೇರ್ಗಡೆಯಾದ ನಂತರ ಮುಗಳಿಯವರು ಹುಬ್ಬಳ್ಳಿಯಲ್ಲಿ ಉಪಾಧ್ಯಾಯ ವೃತ್ತಿಯಲ್ಲಿ ತೊಡಗಿದರು. ಜೊತೆಗೆ ಸಾಹಿತ್ಯದ ಸಂಸಾರವನ್ನೂ ಹೂಡಿದರು. ಅಲ್ಲಿಂದ ೧೯೩೩ ರಲ್ಲಿ ಸಾಂಗಲಿಗೆ ಪ್ರಯಾಣ, ವಿಲಿಂಗ್ಡನ್ ಕಾಲೇಜಿನಲ್ಲಿ ಪ್ರೊಫೆಸರ ಹುದ್ದೆ. ಅಲ್ಲಿ ಇಪ್ಪತ್ತು ವರ್ಷಗಳ ಕಾಲ ಕಾಲೇಜಿನಲ್ಲಿ ಅಭ್ಯುದಯಕ್ಕಾಗಿ ಸೇವೆ. ಸಾಂಗಲಿಯಲ್ಲಿ ರಾವ್ ಸಾಹೇಬರ ಗೆಳೆತನ; ಇವರಿಂದ ಜೀವನದಲ್ಲಿ ಸಿರಿತನ ಸೊಬಗು. ಸಾಂಗಲಿಯಲ್ಲಿ ಕನ್ನಡದ ಕೇಂದ್ರ ಸ್ಥಾಪಿಸಿ ಕನ್ನಡ ಚಟುವಟಿಕೆಗಳಲ್ಲಿ ನೇರವಾಗಿ ಭಾಗವಹಿಸುವ ಸುವರ್ಣಾವಕಾಶ. ಎಲ್ಲಕ್ಕಿಂತಲೂ ಹೆಚ್ಚಾಗಿ ಅವರ ಸಾಧನೆಗೂ, ಸಾಹಿತ್ಯ ರಚನೆಗೂ ತೀರ ಅಗತ್ಯವಾದ ತಪೋವನವು ಮುಗಳಿಯವರಿಗೆ ಸಾಂಗಲಿಯ ಭಾಗದಲ್ಲಿ ದೊರೆಯಿತು.

ಅದೇ ಕಾಲದಲ್ಲಿ ಅವರ ಜೀವನದಲ್ಲಿ ಹಲವಾರು ಸುಖ–ದುಃಖದ ಘಟನೆ

ಗಳು ಮಧ್ಯಂತರದಲ್ಲಿ ನಡೆದವು. ಜೀವನದ ಬಗೆಗಿನ ಅವರ ಶ್ರದ್ಧೆಯನ್ನೇ ಕೆಣಕಿಸಿದವು. ಜೀವನದ ತಳಬುಡವನ್ನೇ ಅಲುಗಿಸುವಂಥ ದುಃಖ ಪರಂಪರೆ ಅವರನ್ನು ಸುತ್ತುಗಟ್ಟಿತು. ಆಗ ಮುಗಳಿಯವರು ಅನುಭವಿಸಿದ ಅಪಾರ ನೋವು ಅವರ ವ್ಯಕ್ತಿತ್ವವನ್ನೇ ನಿರ್ನಾಮ ಮಾಡಬಹುದಾಗಿದ್ದಿತು. ದೇವೀ ಕೃಪೆಯಿಂದ ಮತ್ತು ಸಾಧನೆಯ ಬಲದಿಂದ ಅವೆಲ್ಲ ಕಷ್ಟ ಪರಂಪರೆಗಳೂ ದೂರವಾದವು.

ಎಪ್ಪತ್ತೊಂದು ವರ್ಷಗಳ ತುಂಬು ಜೀವನವನ್ನು ಬಾಳಿರುವ ಮುಗಳಿಯವರು ತಮ್ಮ ಜೀವನದ ಉದ್ದಕ್ಕೂ ಜೇಂದ್ರೆ, ಗೋಕಾಕರ ಸ್ನೇಹದ ಹಂದರವನ್ನು ನೇಯುತ್ತಾ ಬಂದಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಕರ್ನಾಟಕದ ಕಲ್ಯಾಣ ನಗರದ ವಿಶ್ವವಿದ್ಯಾನಿಲಯಕ್ಕೆ ತಮ್ಮ ಸಾಹಿತ್ಯ ಶಾರದೆಯ ಆರಾಧಕತ್ವವನ್ನು ತೋರಿಸಿಕೊಟ್ಟು ವಿಶ್ವವಿದ್ಯಾನಿಲಯದಲ್ಲಿ ಕನ್ನಡದ ಸ್ಥಾನಮಾನವನ್ನು ವಿದ್ಯಾರ್ಥಿಗಳಿಗೆ ಅರಿವು ಮಾಡಿಕೊಟ್ಟಿದ್ದಾರೆ. ಜಡವಾದ ಕನ್ನಡಕ್ಕೆ ಚೈತನ್ಯವನ್ನು ತುಂಬಿದ್ದಾರೆ. ಪ್ರಸನ್ನತೆ, ಶಾಂತತೆಗಳನ್ನು ತಮ್ಮ ಜೀವನದಲ್ಲಿ ಮೊದಲು ಅನುಷ್ಠಾನಕ್ಕೆ ತಂದು, ಅವುಗಳ ಮಹತ್ವವನ್ನು ತಮ್ಮ ಸುತ್ತಮುತ್ತಲಿರುವ ಪರಿಕರಿಯರೆಲ್ಲರಿಗೂ ಮನದಟ್ಟಾಗುವಂತೆ ಮಾಡಿರುವುದು ಮುಗಳಿಯವರ ಜೀವನದ ಮಹತ್ವದ ಸಾಧನೆಯಾಗಿದೆ.

ಮುಗಳಿಯವರ ಸಾಹಿತ್ಯ ಸೇವೆ ಅಪಾರ. ನಾಟಕ, ಕಾವ್ಯ, ಕಾದಂಬರಿ, ಚರಿತ್ರೆ, ವಿಮರ್ಶೆ ಎಲ್ಲದರಲ್ಲಿಯೂ ಪರಿಪೂರ್ಣತೆ, "ಬಾಸಿಗ"ವೆಂಬ ಕವಿತಾ ಸಂಕಲನ, "ಕಾರಣಪುರುಷ" "ನಿತ್ಯನಿರಂತರ" ಸಾಹಿತ್ಯ ಚರಿತ್ರೆ ಮುಂತಾದ ಗ್ರಂಥಗಳು ವಿಶ್ವಸಾಹಿತ್ಯದ ಸಾಲಿನಲ್ಲಿ ನಿಲ್ಲುವ ಉತ್ಕೃಷ್ಟ ಗ್ರಂಥಗಳು. ಇವರ "ಸಾಹಿತ್ಯ ಚರಿತ್ರೆ"ಗೆ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ದೊರೆತಿದೆ. ತುಮಕೂರಿನ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನ ಮುಗಳಿಯವರ ಅಖಂಡ ಸಾಹಿತ್ಯ ಸೇವೆಗೆ ಕನ್ನಡ ಜನತೆ ನೀಡಿದ ಅಭಿಮಾನದ ಸನ್ಮಾನವಾಗಿದೆ.

ದೊರೆತ ಗೌರವ, ಸೋಲರಿಯದ ಸಾಹಿತ್ಯಸೇವೆ, ವಿಸ್ತಾರವಾದ ಪಾಂಡಿತ್ಯ, ಸ್ಥಿರ ಪ್ರಜ್ಞೆ ಇವೆಲ್ಲವೂ ಮುಗಳಿಯವರಿಗೆ ಹುಟ್ಟಿನಿಂದ, ಬಾಳಿನಿಂದ ಸೇರಿಬಂದಿವೆ. ಕಾವ್ಯದ "ರಸಿಕ ರಂಗತ್ವ" ದೊರಕಿದೆ. ಜೀವನ ತುಂಬಿ ತುಳುಕಿದೆ. ಕವಿ ಎಕ್ಕುಂಡಿಯವರು ಮುಗಳಿಯವರನ್ನು ಕಂಡ ದೃಷ್ಟಿಯಿದು:

ಇಷ್ಟೆಲ್ಲ ತುಂಬಿದರು ಒಮ್ಮೆಯೂ ತುಳುಕಿಲ್ಲ
ಕನ್ನಡದ ಈ ಕಲಶ, ನುಡಿಯ ಜೇನುಣಿಸಿದರು

ಬಂದ ಬಂದವರೆದೆಯ ದಾಹವನು ತಣಿಸಿದರು
ಒಮ್ಮೊಮ್ಮೆ ಗುಮ್ಮನಂಟಿಸಿದರೂ ಅಳುಕಿಲ್ಲ.

ಮುಗಳಿಯವರ ಜೀವನ ದೃಷ್ಟಿ ಈ ರೀತಿಯದು; ಅದು ವಸ್ತು ನಿಷ್ಠವಾದುದು ಮತ್ತು ವಿಧಾಯಕವಾದದ್ದು. ವಸ್ತು ನಿಷ್ಠವಾಗಿ ಕಠೋರ ಸತ್ಯವನ್ನು ಕಂಡು ಹಿಡಿಯಬೇಕು. ಧ್ಯೇಯ ಪ್ರವಣವಾಗಿ ಅಂತಿಮ ಸಾಧ್ಯವನ್ನು ಅರಿತು ಕೊಳ್ಳಬೇಕು. ವಿಧಾಯಕವಾಗಿ ಪ್ರಗತಿಯ ಮಾರ್ಗವನ್ನು ಸೂಚಿಸಬೇಕು. ಇದು ಮುಗಳಿಯವರ ದೃಷ್ಟಿ. ಕೆಲವರ ದೃಷ್ಟಿಯಲ್ಲಿ ಈ ಮುಪ್ಪುರಿ ಅಸಾಧ್ಯವೆಂದು ತೋರಬಹುದು. ಮುಗಳಿಯವರು ಜೀವನದಲ್ಲಿ ಸಮನ್ವಯದ ಉಪಾಸಕರಾಗಿರುವ ಕಾರಣ ಇದು ಅವರಿಗೆ ಸಾಧ್ಯವೆಂದು ತೋರುತ್ತದೆ.

ನನ್ನದು ಮುಖ್ಯವಾಗಿ ಕವಿ ಹೃದಯ; ಭಕ್ತ ಕವಿಯ ಅಂತರಂಗ, ಹೃದಯ ಸಂಪತ್ತಿ, ಸಂಕಲ್ಪ ಬಲ, ಸೂಕ್ಷ್ಮ ದೃಷ್ಟಿ ಇವು ನನಗೆ ಹುಟ್ಟಿನಿಂದ ದೊರೆತ ಸ್ವತ್ತು. ರಸಿಕನಾಗಬೇಕೆಂಬುದೇ ಈ ಜೀವನದ ಹಂಬಲ. ಜೀವನ, ಸಾಹಿತ್ಯ ಎರಡಕ್ಕೂ ಈ ರಸಿಕತೆ ಪಸರಿಸಬೇಕು ಎಂಬ ಹಂಬಲ ನನ್ನ ಜೀವನದುದ್ದಕ್ಕೂ ನನ್ನ ಧ್ಯೇಯವನ್ನು ರೂಪಿಸುತ್ತಾ ಬಂದಿದೆ.

ನನ್ನ ರಸಿಕತೆ, ನನ್ನ ಪೂರ್ಣತೆಯ ಸಾಧನೆಯಲ್ಲಿನ ಒಂದು ವ್ರತವಾಯಿತು. ಅದರ ಫಲವಾಗಿ ನನಗೆ ಹಲವಾರು ರಸನಿಮಿಷಗಳು ದೊರೆತವು, ಅದನ್ನು ಅನುಭವಿಸುತ್ತ ಕಾರ್ಯ ತತ್ಪರನಾದಾಗ ಅಮೃತವನ್ನು ಕುಡಿದು ಆನಂದ ಮತ್ತನಾದಂತೆ ಈ ಜೀವ ನಲಿಯಿತು. ಆ ನಿಮಿಷಗಳಲ್ಲಿ ಸುಖವು ಹೆಚ್ಚಿನ ಸುಖವಾಗುತ್ತದೆ. ದುಃಖವೂ ಸುಖದ ರೂಪ ತಾಳುತ್ತದೆ.

ನನಗೆ ಸಾಹಿತ್ಯ ನಿರ್ಮಾಣಕ್ಕಿಂತ ಜೀವನ ರಸಿಕತೆ ಹೆಚ್ಚು ಬೆಲೆಯುಳ್ಳದ್ದು ಎಂದು ಮುಗಳಿಯವರು ತಮ್ಮ ಜೀವನ ದೃಷ್ಟಿಯ ಬಗ್ಗೆ ಹೇಳುತ್ತಾರೆ. ಈ ಇಳಿವಯಸ್ಸಿನಲ್ಲಿಯೂ ಬಿಡುವಿಲ್ಲದ ಕೆಲಸದಿಂದಾಗಿ ಮುಗುಳಿಯವರ ಜೀವನ ಸಫಲವಾಗಿದೆ. ಅವರ ವ್ಯಕ್ತಿತ್ವ ಹಿರಿದಾಗಿದೆ.



# ಶ್ರೀ ಬಳ್ಳಾರಿ ಬೀಚಿ

ಬೀಚಿ ಎಂಬ ಹೆಸರು ಕನ್ನಡ ಹಾಸ್ಯಪ್ರಪಂಚದಲ್ಲಿ ಅತಿ ದೊಡ್ಡ ಹೆಸರು. ಹಾಸ್ಯದಿಂದ ಕೂಡಿದ, ಕಾದಂಬರಿಗಳು, ಕತೆಗಳು, ನಾಟಕಗಳು, ಪ್ರವಾಸ ಕಥನಗಳು ಸೇರಿ ಬೀಚಿಯವರು ಬರೆದ ಪುಸ್ತಕ ಸುಮಾರು ಎಪ್ಪತ್ತಕ್ಕೂ ಹೆಚ್ಚಿನದು. ಹಿಂದಿನ ಕಾಲದ ಶಿಕ್ಷಣವಾದ, ಎಸ್.ಎಸ್.ಸಿ. ಪಾಸಾದ ಈ ವ್ಯಕ್ತಿ ಇಷ್ಟೊಂದು ಪುಸ್ತಕ ಬರೆಯುವುದೆಂದರೆ ಅದೊಂದು ಪವಾಡವೇ ಸರಿ. ಆಧುನಿಕ ಕನ್ನಡ ಸಾಹಿತ್ಯದಲ್ಲಿ, ನಗೆ ಬರಹಗಳ ಅಭಾವವಿದ್ದಾಗ ಬೀಚಿಯ ಅವತಾರವಾಯಿತು. ಎಷ್ಟೋ ಜನರು ತಮ್ಮ ಹಲ್ಲುಗಳನ್ನು ಕೇವಲ ಟೂತ್‌ಬ್ರಷ್‌ಗೆ ಮಾತ್ರ ತೋರಿಸುತ್ತಿದ್ದ ಕಾಲದಲ್ಲಿ, ಒಬ್ಬರು ಇನ್ನೊಬ್ಬರ ಹಲ್ಲನ್ನು ನೋಡುವಷ್ಟು ಅವಕಾಶ ಸಿಕ್ಕಿತು. ಬೀಚಿಯವರ ಸಾಹಿತ್ಯದಿಂದ ಆಕರ್ಷಕರಾದ ವ್ಯಕ್ತಿಗಳು ಲೆಕ್ಕವಿಲ್ಲದಷ್ಟು, ಇದೊಂದು ಅದ್ಭುತ ಸಾಧನೆ. ಮಾತಿಗೆ ನಿಂತರೆ ಮದುವೆ ಮನೆಯಲ್ಲಿ ಹೋಳಿಗೆ ಬಡಿಸುವುದರಿಂದ ಹಿಡಿದು, ಕಮಲಮ್ಮ ಹೋರಿ ಕರುವಿಗೆ ಜನ್ಮವಿತ್ತ ತನಕ ಮಾತು. ಬೀಚಿಯವರ ಮಾತನ್ನು ಕೇಳಲು ಬಿಡದಷ್ಟು ಜನರ ನಗು, ನಗು, ನಗು.

೧೯೧೩ ರಲ್ಲಿ ಹುಟ್ಟಿದ ಬೀಚಿಯವರು ಯಾವ ಇಂಗ್ಲೀಷ್ ಪರೀಕ್ಷೆಗೂ ಕುಳಿತಿಲ್ಲ. ಆದರೆ, ಯಾವ ಎಂ.ಎ. ಪಾಸಾದ ಮಹಾನುಭಾವರಿಗಿಂತ ಕಡಿಮೆ ಇಲ್ಲದೆ, ಇಂಗ್ಲೀಷಿನಲ್ಲಿ ಮಾತು, ಭಾಷಣ. ಕೇವಲ ಪೋಲೀಸ್ ಖಾತೆಯಲ್ಲಿ ಅಟೆಂಡರ್ ಕೆಲಸಕ್ಕೆ ಸೇರಿ, ಸಿ. ಐ. ಡಿ. ವಿಭಾಗದಲ್ಲಿ ಸೂಪರಿಂಟೆಂಡೆಂಟ್ ಆಗಿ ನಿವೃತ್ತಿ ಹೊಂದಿದ ಭೂಪ.

ಬೀಚಿಯವರನ್ನ ಕಂಡರೆ ಎಲ್ಲರಿಗೂ ಭಯ. ಅವರ ಅಧಿಕಾರದಿಂದಲ್ಲ, ಅವರ ಸಾಹಿತ್ಯದಿಂದ. ಎಲ್ಲಿ ತಮ್ಮ ಮೇಲೆ ಏನು ಬರೆಯುತ್ತಾರೋ ? ಎಲ್ಲಿ ಹಾವು ಬಿಡುತ್ತಾರೋ, ಎಲ್ಲಿ ಪುಂಗಿ ಊದುತ್ತಾರೋ ಎಂಬುದು. ಅವರಿಗೆ ಕಣ್ಣಿಗೆ ಕಾಣದ ವಸ್ತುವಿಲ್ಲ. ಖಾದಿ, ಖಾಕಿಯಿಂದ ಹಿಡಿದು, ವ್ಯಭಿಚಾರ, ಭ್ರಷ್ಟಾಚಾರದ ತನಕ ಎಲ್ಲವೂ ಹಾಸ್ಯದ ಲೇಪನ, ಮನಸ್ಸಿಗೊಂದು ಆಪ್ಯಾಯಮಾನ. ಜೀವನ ದಲ್ಲಿ ಅನೇಕಸಲ ದುಃಖವನ್ನೇ ಅನುಭವಿಸುತ್ತೇವೆ. ಆಗೊಮ್ಮೆ ಈಗೊಮ್ಮೆ ಯಾದರೂ ನಗೆಯಿಂದ ಜೀವನ ಕಳೆಯಬೇಕೆಂಬುದೇ ಬೀಚಿಯವರ ಅಭೀಷ್ಟ. ಇದರಿಂದಾಗಿ ಅವರ ಸಾಹಿತ್ಯಲೋಕ ಪ್ರಿಯವಾಯಿತು. ಜನರು ಹಾಸ್ಯ ಪ್ರಿಯರೂ ಆದರು.

ಬೀಚಿಯವರು, ಜೀವನವನ್ನ ಬಹಳ ಹತ್ತಿರದಿಂದ ನೋಡಿದ್ದಾರೆ. ನೋಡಿ ದ್ದನ್ನು ನೋಡಿದಂತೆ, ಸಾಹಿತ್ಯದಲ್ಲಿ ಬರೆಯುತ್ತಾ ಬಂದರು. ನೋವು ನಲಿವು, ಸುಖ ದುಃಖ ಎಲ್ಲವೂ ಹಾಸ್ಯದ ಹಿನ್ನೆಲೆಯಲ್ಲಿ ಬಾಳಿಗೊಂದು ಗೋಪುರ ಕಟ್ಟಿ ದರು. ನಗೆಬರಹಕ್ಕೊಂದು ಕಿರೀಟವಿಟ್ಟರು. ಯಾವ ಒಂದು ಹೊಸಗನ್ನಡ ಸಾಹಿತ್ಯ ದಲ್ಲೂ ಸಿಗಲಾರದಷ್ಟು ಶಬ್ದಸಂಪತ್ತನ್ನು, ಬಹುರೂಪದ ಅರ್ಥವನ್ನು ಹುಡುಕಿ ತೆಗೆದರು ಎಲ್ಲರೂ ಸುಲಭವಾಗಿ ನಗುವಂತೆ ಅರ್ಥ ಕಲ್ಪಿಸಿಕೊಟ್ಟರು. ಇವರ ಮೊದಲ ಕಾದಂಬರಿ "ದಾಸಕೂಟ" ಅದಕ್ಕೆ ಅ.ನ.ಕೃ.ರವರ ಮುನ್ನುಡಿ, ಹಾಸ್ಯ ಸಾಹಿತ್ಯದಲ್ಲಿ ಮೊದಲ ಸ್ಥಾನವನ್ನು ಪಡೆದ ಮಹಾ ಮೇರುಕೃತಿಯಾಗಿ ಪ್ರಚಾರ ವಾಯಿತು. ಅದರ ಹಿನ್ನೆಲೆಯಲ್ಲಿ ಬಂದವು, ಸತೀಸೂಳೆ, ಸರಸ್ವತಿಸಂಹಾರ, ಖಾದಿ ಸೀರೆ, ಬೆಂಗಳೂರು ಬಸ್ಸು, ಹೆಣ್ಣು ಕಾಣದ ಗಂಡು, ಸತ್ತವನು ಎದ್ದು ಬಂದಾಗ, ಕಾಣದ ಸುಂದರಿ, ಕಲ್ಲು ಹೇಳಿತು, ದೇವನಹೆಂಡ, ಏರದಬಳೆ, ಅಮ್ಮಾವ್ರ ಗಂಡ, ಹೀಗೆ ಒಂದಲ್ಲ ಎರಡಲ್ಲ ಐವತ್ತಕ್ಕೂ ಮಿಕ್ಕಿ ಕಾದಂಬರಿಗಳು. ಎಲ್ಲ ಕಾದಂಬರಿಗೂ ನಾಲ್ಕರಿಂದ ಆರನೇ ಮುದ್ರಣದ ತನಕ, ಒಂದೊಂದೂ ಹದಿನೈದು ಸಾವಿರ ಪ್ರತಿ ಗಳ ಮಾರಾಟ. ಕನ್ನಡ ಸಾಹಿತ್ಯದಲ್ಲೊಂದು ಹೊಸ ದಾಖಲೆ ಸೃಷ್ಟಿ.

ಬೀಚಿಯವರಿಗೆ, ಪುಸ್ತಕ ಬರೆಯುವುದು ಎಷ್ಟು ಇಷ್ಟವೋ ಅಷ್ಟೇ ಓದು ವುದರಲ್ಲೂ ಕೂಡ ಇಷ್ಟ. ಕನ್ನಡ, ಇಂಗ್ಲೀಷ್ ಪುಸ್ತಕಗಳ ರಾಶಿ ರಾಶಿ ಕಂತೆ ಗಳು ಬೀಚಿಯವರ ಮನೆಯ ಕಪಾಟು ತುಂಬಿದೆ. ಬೀಚಿಯವರ ಕೈಯಲ್ಲಿ ಯಾವುದಾದರೂ ಒಂದು ಪುಸ್ತಕ ಇರಲೇಬೇಕು. ಸ್ವಲ್ಪ ಸಮಯ ಸಿಕ್ಕಿದರೂ ಸಾಕು, ಪುಸ್ತಕ ಓದಲು ಪ್ರಾರಂಭ ಅದರಲ್ಲೂ ಇಂಗ್ಲೀಷ್ ಪುಸ್ತಕವೆಂದರೆ ಪಂಚ ಪ್ರಾಣ.

ಬೀಚಿಯವರ ಪುಸ್ತಕದ ತಲೆಬರಹವೇ ಒಂದು ಅರ್ಥಪೂರ್ಣವಾದುದು. "ಸತ್ತವನು ಎದ್ದು ಬಂದಾಗ" ಸತ್ತವನು ಹೇಗೆ ಎದ್ದು ಬರುತ್ತಾನೆ ಇದೊಂದು ಪ್ರಶ್ನೆ. ಅದೇ ರೀತಿ, "ಕಾಣದ ಸುಂದರಿ" ವ್ಯಕ್ತಿ ಕಣ್ಣಿಗೆ ಕಾಣದಾಗ, ಅವಳು ಸುಂದರಿ ಎಂದು ಹೇಗೆ ಹೇಳುವುದು. ಅದೇ ರೀತಿಯಲ್ಲಿ "ಸತೀಸೂಳೆ" ಕೂಡ ಒಂದು ವಿಶಿಷ್ಟವಾದ ಹೆಸರು.

ಕಳೆದ ಮೂರು ದಶಕಗಳಿಂದ ಕನ್ನಡದ ಹಿತಕ್ಕಾಗಿ, ಅಖಂಡ ಕರ್ನಾಟಕಕ್ಕಾಗಿ, ಕನ್ನಡದ ಮೇಲೆ ಹಿಂದಿಯ ದಾಳಿಯನ್ನು ತಡೆಯುವುದಕ್ಕಾಗಿ ನಾಡ ನುಡಿಗಳ ಸೇವೆಗಾಗಿ ಅ. ನ. ಕೃಷ್ಣರಾಯರು ಕರ್ನಾಟಕದ ಉದ್ದಗಲಕ್ಕೂ ಪ್ರವಾಸ ಹೊರಟಾಗ ಬೀಚಿಯವರು ಅವರ ಸಂಗಡ ಪ್ರವಾಸ ಹೊರಟು ತಮ್ಮ ಮೊನಚಾದ ಹಾಸ್ಯದ ಮಾತಿನಿಂದ ಕನ್ನಡಿಗರನ್ನು ಚುಚ್ಚಿ ಬಡಿದೆಬ್ಬಿಸಿ ಕಳೆದುಕೊಂಡ ಮೇಲೆ ವ್ಯಥೆ ಪಡಬೇಡಿ ಎಂದು ಎಚ್ಚರಿಸಿದರು.

ಹಾಸ್ಯ ಸಾಹಿತಿ ಬೀಚಿಯವರ ಬಗ್ಗೆ, ನಗೆ ಬರಹಗಾರ ಶ್ರೀ ನಾಡಿಗೇರ ಕೃಷ್ಣರಾವ್ ಹೀಗೆ ಹೇಳುತ್ತಾರೆ. ಬೀಚಿ ಉತ್ತಮ ಭಾಷಣಕಾರರು, ಯಾವುದೇ ಇರಲಿ ಅದನ್ನು ಹಿಡಿಯೊಳಕ್ಕೆ ಸಿಕ್ಕಿಸುವ ಜಾಣ್ಮೆ ಅವರಿಗಿದೆ. ಮಾತನಾಡುವಾಗ ಅವರು ನಗುವುದಿಲ್ಲ, ವಿಷಯಗಳನ್ನು ಅವರು ಬಹು ಗಂಭೀರವಾಗಿಯೇ ಆರಂಭಿಸುತ್ತಾರೆ ನಗೆ ಬಳೆ ತಾನೇ ತಾನಾಗಿ ಹಬ್ಬುತ್ತವೆ ಮಾತಿನ ಬರವಲ್ಲಿ ಬೇರೆಯವರನ್ನ ತರಾಟೆಗೆ ತೆಗೆದು ಕೊಳ್ಳುತ್ತಾರೆ. ರಾಜಕಾರಣಿಗಳಂತು ಬೀಚಿಯವರ ಕೈಗೆ ಸಿಕ್ಕಿ ವಿಲಿ ವಿಲಿ ಒದ್ದಾಡಿದ್ದಾರೆ ಬೀಚಿ ತಮ್ಮನ್ನು ಹೊರತುಪಡಿಸಿಕೊಳ್ಳುವುದಿಲ್ಲ. "ನಾನು ಪವಿತ್ರವಾದ ಪೋಲೀಸ್ ಇಲಾಖೆಯಲ್ಲಿ ಮೂವತ್ತು ವರ್ಷ ದುಡಿದಿದ್ದೇನೆ" ಎಂದು ಅವರು ಹೇಳಿದಾಗ ಏನಾಗುತ್ತದೆ ಎಂಬುವನ್ನ ಊಹಿಸುವುದೇ ಒಳ್ಳೆಯದು.

ಬೀಚಿಯವರ "ತಿಮ್ಮನ ತಲೆ" ಪುಸ್ತಕ ಈಗಾಗಲೇ ಹದಿನೈದನೇ ಮುದ್ರಣವನ್ನು ಕಂಡಿದೆ. ಇವರ ನಗೆಬರಹದ ಕಥಾನಾಯಕ ತಿಂಮ, ತಿಮ್ಮನಿಲ್ಲದೆ ಸಣ್ಣ ಕಥೆಯಾಗಲಿ ಚುಟುಕಾಗಲಿ ಪ್ರಾರಂಭವಾಗುವುದಿಲ್ಲ ಸಂಗಡ ತಿಮ್ಮ ಸವಾರಿ ಮಾಡುವ ಕತ್ತೆ, ಅದಕ್ಕೆ ಉದ್ದಕೋಲಿಗೆ ಹುಲ್ಲಿನ ಮೆದೆ ಕಟ್ಟಿ ಮುಂದೆ ಹಿಡಿದು ಕತ್ತೆ ಅದನ್ನು ಹಿಡಿಯುವುದಕ್ಕಾಗಿ ಮುಂದೆ ಓಡುತ್ತಿರುವ ಚಿತ್ರ ಇದನ್ನ ನೋಡಿದಾಗಲೆಲ್ಲ ಮನಸ್ಸಿನಲ್ಲಿ ನಗು ಮೂಡಲೇಬೇಕು, ಇನ್ನೊಬ್ಬರಿಗೆ ನಮ್ಮ ಹಲ್ಲು ಕಾಣಲೇಬೇಕು.

ಬೀಚಿಯವರ ಎರಡು ಜನ ಗಂಡು ಮಕ್ಕಳಲ್ಲಿ ಪ್ರಾಯಕ್ಕೆ ಬಂದ ಒಬ್ಬ ಮಗ ಅಕಾಲ ಮೃತ್ಯುವನ್ನು ಕಂಡಾಗ ಬೀಚಿ ಅವರ ಪತ್ನಿ ಶ್ರೀಮತಿ ಸೀತಾ ಬಾಯಿಯವರಿಗೆ ಜೀವನವೇ ಕುಸಿದು ಬಿದ್ದಂತೆ ಕಂಡಿತು ಆದರೆ ಬೀಚಿ ಮಾತ್ರ ತನ್ನ ನೋವನ್ನ ಇನ್ನೊಬ್ಬರಿಗೆ ತೋರಿಸಿಕೊಟ್ಟಿಲ್ಲ. ಇನ್ನೊಬ್ಬ ಮಗ ಡಾಕ್ಟರಾಗಿ ಬೆಂಗಳೂರಿನ ಶಾಂತಿನಗರದಲ್ಲಿ ವೈದ್ಯಕೀಯ ವೃತ್ತಿಯನ್ನು ನಡೆಸುತ್ತಿದ್ದಾರೆ. ಬೀಚಿ ಯವರು ಲೋಕದ ಜನತೆಗೆ ಟಿಕೆಟ್ ಇಲ್ಲದೆ ನಗೆಯ ನಾಟಕವನ್ನು ತೋರಿಸಿದ ಹಾಸ್ಯ ಕಂಪೆನಿಯ ಮಾಲೀಕ ಈ ನಗೆಯ ಬೀಚಿ ಎಂಬ ಕಸ್ತೂರಿ ನಾಡಿನ ಉದ್ದಗಲಕ್ಕೂ ಹರಡಿದೆ ಕಸ್ತೂರಿ ಪರಿಮಳವನ್ನು ಸೇವಿಸುವುದು ಕನ್ನಡಿಗರದು.



# ಡಾ॥ ಸಾ. ಶಿ. ಮರುಳಯ್ಯ

ಕಪ್ಪು ಬಣ್ಣ, ದುಂಡು ಮುಖ, ಐವತ್ತರ ಗಡಿಯಲ್ಲಿ ಕಾಲಿಟ್ಟಿರುವ ಸಾ. ಶಿ. ಮರುಳಯ್ಯ ಮಾತನಾಡಲು ನಿಂತರೆ ಕಾಲವನ್ನೇ ಮರೆಸುವ ಮಹಾವಾಚಾಳಿ. ಯೌವ್ವನದ ಹುಮ್ಮಸ್ಸು, ಮಾತಿನಿಂದ ಜನರನ್ನು ಸೆರೆಹಿಡಿಯುವ ಮಹಾಕುಶಲತೆ.

ವಾಲ್ಮೀಕಿಯಿಂದ ಹಿಡಿದು, ಕುವೆಂಪು ತನಕ ಸಾಹಿತ್ಯವನ್ನು ವಿಮರ್ಶಿಸುವ ಪಾಂಡಿತ್ಯ, ಎಲ್ಲವನ್ನೂ ಎಲ್ಲರಿಗೂ ತಿಳಿಯುವಂತೆ ಹೇಳುವುದು ಮರುಳಯ್ಯನವರ ವೈಶಿಷ್ಟ್ಯ.

ಮರುಳಯ್ಯನವರ ಜನ್ಮಸ್ಥಳ ಚಿಕ್ಕನಾಯ್ಕನಹಳ್ಳಿ ಹತ್ತಿರ ಸಾಸಲು. ಊರಿಗೆ ಇವರೇ ದೊಡ್ಡ ನಾಯಕರು.

ತಂದೆ ಶಿವರುದ್ರಯ್ಯ ತಾಯಿ ಸಿದ್ದಮ್ಮ ಇವರಿಗೆ, ಮರುಳಯ್ಯ ಮತ್ತು ಶಾಂತಮೂರ್ತಿ ಇಬ್ಬರು ಮಕ್ಕಳು. ಪ್ರಾಥಮಿಕ ವಿದ್ಯಾಭ್ಯಾಸ ಜನ್ಮಸ್ಥಳದಲ್ಲಿ.

ಮಾಧ್ಯಮಿಕ ವಿಧ್ಯಾಭ್ಯಾಸ ಶೆಟ್ಟೀಕೆರೆಯಲ್ಲಿ, ಪ್ರೌಢವಿದ್ಯಾಭ್ಯಾಸ ತಿಪಟೂರಿನಲ್ಲಿ, ಚಿತ್ರದುರ್ಗ ಮತ್ತು ಮೈಸೂರಿನಲ್ಲಿ ಉನ್ನತ ವಿದ್ಯಾಭ್ಯಾಸ. ಅಲ್ಲಿ ಎಂ. ಎ. ಪದವಿ. ಇಲ್ಲಿಗೆ ಒಂದು ಹಂತದ ಜೀವನ.

ಮರುಳಯ್ಯನವರದು ಶಿಕ್ಷಕರ ವಂಶ. ತಂದೆ ಶಿಕ್ಷಕರು. ಅದೇ ದಾರಿಯಲ್ಲಿ ಮಗನ ವೃತ್ತಿ. ಇದರಿಂದ ಜೀವನದಲ್ಲಿ ತೃಪ್ತಿ. ಇವರು ಕರ್ನಾಟಕದಲ್ಲಿ ಸುತ್ತದೇ ಇರುವ ದಾರಿಯಿಲ್ಲ. ಹಳ್ಳಿ, ನಗರ ಇವೆರಡರ ಪರಿಶ್ರಮ ಜೀವನದಲ್ಲಿ ತುಂಬಿದೆ.

ಶಿಕ್ಷಣ ವೃತ್ತಿಯಲ್ಲಿ ಚಾಮರಾಜನಗರ, ಮೈಸೂರು, ದಾವಣಗೆರೆಯಲ್ಲಿ ಉಪಾಧ್ಯಾಯರಾಗಿ ಕೆಲಸ; ಎಂಟು ವರ್ಷಗಳ ಕಾಲ ಮಲೆನಾಡಿನ ಶಿವಮೊಗ್ಗೆಯ ಸಹ್ಯಾದ್ರಿಯಲ್ಲಿ ಅಧ್ಯಾಪಕ ವೃತ್ತಿ. ನಂತರ ಕನ್ನಡಿಗರ ಕಲ್ಯಾಣನಗರ ಬೆಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಕೆಲಸ. ಪುನಃ ಬೆಂಗಳೂರಿನಿಂದ ತುಮಕೂರು ವಿಜ್ಞಾನ ಕಾಲೇಜಿಗೆ ವರ್ಗ. ತುಮಕೂರಿನಿಂದ, ಚನ್ನಪಟ್ಟಣ ಶ್ರೀ ಕುವೆಂಪು ಮಹಾ ವಿದ್ಯಾಲಯದ ಪ್ರಿನ್ಸಿಪಾಲ ಗಿರಿ.

ಮರುಳಯ್ಯನವರಿಗೆ ತಂದೆಯೇ ಪ್ರಥಮ ಗುರು. ಮಗನ ಅಭ್ಯುದಯಕ್ಕಾಗಿ ಬಾಳನ್ನೇ ಸವೆಸಿದ ಮಹಾ ಸದ್ಗುಣಿ ಅವರು. ಮರುಳಯ್ಯನವರಿಗೆ ತಂದೆಗಿಂತ ಪ್ರೀತಿಯ ವಸ್ತು ಬೇರೊಂದಿಲ್ಲ. ಇದ್ದರೆ ಅದು, ಅವರ ಧರ್ಮ ಪತ್ನಿ!

ಹೆಸರು ಮರುಳ, ಇವರ ಹೆಂಡತಿ ಮರುಳಿ (ವೀಣಾ) ಪ್ರೀತಿಗೆ ಇವರು "ಮಿನ್ನಿ" ಎಂದು ಕರೆಯುತ್ತಾರೆ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿ ಗಳವರ ಆಶ್ರಮದಲ್ಲಿ ಶಕುಂತಲೆಯಾಗಿ ಬೆಳೆದ ಕನ್ಯೆ–ಇವರ ಮನದನ್ನೆ. ಇವರ ಬದುಕು ತುಂಬಿದ ಭಾಗೀರಥಿ! ಮುತ್ತಿನಂತಹ ಮೂರು ಮಕ್ಕಳ ತಾಯಿ, "ಒಂದು ಹೆಣ್ಣು ಎರಡು ಗಂಡು" ಮಿತಸಂತಾನದ ಈ ಜೀವನದಿಂದ ಇವರಿಗೆ ಅಪಾರ ತೃಪ್ತಿ. ಬಾಳು ಬಂಗಾರ; ಜೀವನ ನಂದಾದೀಪ.

ಮರುಳಯ್ಯನವರು ಬದುಕಿನಲ್ಲಿ ಬಹು ರೀತಿಯ ಕನಸು ಕಂಡವರು. ಅಧ್ಯಾಪಕ ವೃತ್ತಿ ಅವರಿಗೆ ಒಲಿದು ಬಂದ ಕಾಯಕ. ಉಪಾಧ್ಯಾಯ ವೃತ್ತಿ ಸರ್ವಶ್ರೇಷ್ಠವೆಂದೂ ಆ ಯೋಗ್ಯತೆ ತನಗಿಲ್ಲವೆಂದೂ ಒಮ್ಮೆ ಸಾಕ್ರೆಟೀಸ್ ಹೇಳಿದ್ದ. ಆದರೆ ಆ ಭಾಗ್ಯ ಮರುಳಯ್ಯನವರಿಗಿದೆ.

ಈ ಕಾಯಕದಲ್ಲಿ ಸಿಗುವಷ್ಟು ತೃಪ್ತಿ ಬೇರಾವುದರಲ್ಲೂ ದೊರೆಯಲಾರದೆಂದು ಇವರ ನಂಬಿಕೆ. ಅಧ್ಯಾಪಕ ವೃತ್ತಿ ಅತ್ಯಂತ ಪವಿತ್ರ ಕಾರ್ಯ, ಅದರ ಪಾವಿತ್ರ್ಯತೆ ಗಾಗಿ ಹಗಲಿರುಳೂ ದುಡಿಮೆ. ವಿದ್ಯಾರ್ಥಿಗಳ ಬಗ್ಗೆ ಇವರಿಗೆ ಇನ್ನಿಲ್ಲದ ಪ್ರೀತಿ. ಗುರುವಿನ ಬಗ್ಗೆ ವಿದ್ಯಾರ್ಥಿಗಳಲ್ಲಿಯೂ ಅಷ್ಟೇ.

ಇವರು ಕಾಯಕದಲ್ಲಿ ಎಂದೂ ಎಡವಿದವರಲ್ಲ. ಶಿಷ್ಯಕೋಟಿಯ ಅಪಾರ ಸೈನ್ಯ ಇವರ ಹಿಂದಿದೆ. ಜೀವನದಲ್ಲಿ ಯಾವುದನ್ನೂ ಎಂದೂ ಬಯಸಿದವರಲ್ಲ. ಪ್ರೀತಿ ವಿಶ್ವಾಸ, ಅಂತಃಕರಣ ಇವರಲ್ಲಿ ಸದಾ ಸಂಚಾರ, ಉತ್ತಮ ಮಾನವ.

ವಿದ್ಯೆಗೆ ವಿನಯವೇ ಭೂಷಣ ಎಂದು ತಿಳಿದವರಲ್ಲಿ ಇವರೊಬ್ಬರು. ತುಂಬ ಸ್ನೇಹಪರ ಜೀವಿ. ದಾಕ್ಷಿಣ್ಯ ಸ್ವಭಾವ ಹೆಚ್ಚು. ಇದರಿಂದ ಹಲವು ಭಾರಿ ತಮಗೆ ತೊಂದರೆ ತಂದುಕೊಂಡಿದ್ದೂ ಉಂಟು. ಇದನ್ನೇ ಇವರ ದೌರ್ಬಲ್ಯವೆಂದು ತಿಳಿದವರೂ ಉಂಟು. ಮುಂದಿಯ ಜಿಸ್ನ ಹಿಂದೆ ನಡೆಯುವ ಹಲವು ದೋಷಗಳನ್ನು ಹತ್ತಿಕ್ಕಲು, ತುಳಿದು ನಾಶಮಾಡಲು ಮರುಳಯ್ಯನವರಿಂದ ಸರ್ವ ಪ್ರಯತ್ನ, ಇದೆಲ್ಲವೂ ಸ್ವಪ್ರಯತ್ನವೇ.

ಮರುಳಯ್ಯನವರಿಗೆ, ನಾಟಕವೆಂದರೆ ಬಲು ಹುಚ್ಚು. ಇದರಿಂದ ಜೀವನದಲ್ಲಿ ಹೊಸ ಬಿಚ್ಚು, ನೂರಾರು ನಾಟಕಗಳಲ್ಲಿ ಅಭಿನಯ. ಇವರನ್ನು ಇವರ ಮಿತ್ರರು, ನಾಟಕದ ಮರುಳಯ್ಯನೆಂದೇ ಕರೆಯುತ್ತಾರೆ. ಮತ್ತೆ ಕೆಲವರು, ಇವರು ಬಹಳ ನಾಟಕವಾಡುತ್ತಾರೆ ಎಂದು ವ್ಯಂಗ್ಯ ನುಡಿ ನುಡಿದಿದ್ದಾರೆ. ಆದರೆ, ನಿಜ ಹೇಳುವುದಾದರೆ, ಇವರಿಗೆ ಜೀವನ ರಂಗದಲ್ಲಿ ನಾಟಕವಾಡುವ ಅಭ್ಯಾಸವಿಲ್ಲ, ಕೇವಲ ಕಲಾರಂಗದಲ್ಲಿ ಮಾತ್ರ ಬಣ್ಣ ಹಚ್ಚಿ ಅಭಿನಯಿಸಿದ ಅಭ್ಯಾಸ.

ಹಳ್ಳಿಯಾಗಲಿ ನಗರವಾಗಲಿ ನಾಟಕವೆಂದರೆ ಪಂಚಪ್ರಾಣ. ಭಕ್ತಪ್ರಹ್ಲಾದನಿಂದ ಹಿಡಿದು, ಉಂಡಾಡಿಯ ಗುಂಡನ ಪಾತ್ರದ ತನಕ ಅಭಿನಯಿಸಿದ ಸೈಜನಟ. ನಾಟಕದ ಹುಚ್ಚು ಇಂದಿಗೂ ಹೋಗಿಲ್ಲ. ಸಿನೇಮಾದ ಕೃತಕಕಲೆ ಹಿಡಿಸುವುದಿಲ್ಲ. ಹಳ್ಳಿಯ ಬಯಲಾಟ, ಯಕ್ಷಗಾನವೆಂದರೆ ಇವರಿಗೆ ಪ್ರಿಯವಾದ ಕಲೆ.

ದೀನದಲಿತರ ಬಗ್ಗೆ ವಿಶೇಷ ಕಳಕಳಿ ಇದೆ. ಇವರು ತಮ್ಮ ಮನೆಯ ಹಳೆಯ ಬಟ್ಟೆಗಳನ್ನು ನೆಲ ಸಾರಿಸಲಿಕ್ಕಾಗಲಿ, ಅಲ್ಯೂಮಿನಿಯಂ ಪಾತ್ರೆಯ ಮಾರಾಟಗಾರನಿಗಾಗಲಿ ಕೊಡುವುದಿಲ್ಲ. ಒಮ್ಮೆ ಇವರ ಹೆಂಡತಿ ವೀಣಾ, ಹಳೇ ಬಟ್ಟೆಗಳ ತೂಕಕ್ಕೆ ಅಲ್ಯೂಮಿನಿಯಂ ಪಾತ್ರೆಗಳನ್ನು ಕೊಳ್ಳಲು ಹೋದಾಗ, ಇವರು ತಡೆದುದೂ ಉಂಟು.

'ಏಕೆ'? ಎಂದು ಪ್ರಶ್ನಿಸಿದಾಗ 'ಇವರು ತನ್ನಾಕೆಗೆ ಹೇಳಿದ ಮಾತು ಇದು: ಈ ಬಟ್ಟೆಗಳ ತೂಕಕ್ಕೆ ನಲವತ್ತು ಪೈಸೆ ಬೆಲೆಬಾಳುವ ಪಾತ್ರೆಗಳು ಬರಬಹುದು:

ಆದರೆ ಇದೇ ಬಟ್ಟೆಯನ್ನು ಬಡವರಿಗೆ ಕೊಟ್ಟರೆ ಅವರು ನಲವತ್ತು ದಿನಗಳ ಮಟ್ಟಿಗೆ ನಾಲ್ಕು ಜನರ ಮುಂದೆ ಮಾನ ಮುಚ್ಚಿಕೊಳ್ಳುತ್ತಾರೆ. ಅದರ ಪುಣ್ಯ ನಮ್ಮದಾಗುತ್ತದೆ.' ಇವರು ತಮ್ಮ ನಿತ್ಯಜೀವನದಲ್ಲಿ ಕೂಡ, ದೀನರಲ್ಲಿ ದಯಾಪರತೆಯುಳ್ಳ ವ್ಯಕ್ತಿ.

ಕಾವ್ಯೋಪಾಸನೆ ಇವರಿಗೆ ಚಿಕ್ಕಂದಿನಿಂದಲೂ ಬೆಳೆದು ಬಂದ ಕಸುಬು. ಇವರು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಹಲವು ಭಾವಗೀತೆಗಳನ್ನು ಓದಿ, ಇವುಗಳನ್ನು ಮನುಷ್ಯರು ಬರೆಯುತ್ತಾರೋ? ಅಥವಾ ದೇವತೆಗಳೋ? ಎಂದು ಕೇಳಿದ್ದರಂತೆ. ಅಲ್ಲಿಯೇ ಇದ್ದ ಹಿರಿಯರೊಬ್ಬರು ಮನುಷ್ಯರೇ ಬರೆಯುತ್ತಾರೆ; ಬರೆಯಲು ಸಾಧ್ಯ ಎಂದು ತಿಳಿಸಿದಾಗ ಅಂದಿನಿಂದ ತಾನೇಕೆ ಬರೆಯಬಾರದೆಂಬ ಛಲ.

ಇದಕ್ಕೆ ಪ್ರೋತ್ಸಾಹಕವಾಗಿ ಪು.ತಿ.ನ.ರವರ ಬೆಂಬಲ. ನೀವು ಕೇವಲ ಉತ್ಸಾಹಿಗಳೆಂದು ತಿಳಿದಿದ್ದೆ. ನಿಮ್ಮಲ್ಲಿ ಕವಿತೆಯ ಸೆಲೆ ಇದೆ, ವೃದ್ಧಿಪಡಿಸಿಕೊಳ್ಳಿ ಎಂದು ಬೆನ್ನುತಟ್ಟಿದರು ಕುವೆಂಪು, ಬೇಂದ್ರೆಯವರ ಆಶೀರ್ವಾದವೂ ಕೂಡಿ ಬಂತು. ೧೯೫೪ ರಲ್ಲಿ ಇವರ ಉತ್ತಮ ಕವನ ಸಂಕಲನ "ಶಿವತಾಂಡವ" ಹೊರಬಂದಿತು. ಇವರ "ಮರೀಬೇಡಿ" ಎಂಬ ಪ್ರಹಸನ, "ಕೆಂಗನ ಕಲ್ಲು" ಕವನ ಸಂಕಲನ ಜನಪ್ರಿಯ ಕೃತಿಗಳು. ಇದರಿಂದ ಇವರ ಕೀರ್ತಿ ಪತಾಕೆ ಹಾರಿತು. ರಾಜ್ಯ ಸರ್ಕಾರದ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ದೊರೆಯಿತು. ಅನಂತರ "ವಿಭೂತಿ ಪುರುಷರು", "ಪುರುಷ ಸಿಂಹ", "ಹೇಮಕೂಟ", "ಸೀತಾವನವಾಸ", "ಭಾರತ ರತ್ನ", "ಅಗ್ರತಾಂಬೂಲ" ಇತ್ಯಾದಿ ಗ್ರಂಥಗಳು ಅಚ್ಚಾದವು.

ಶ್ರೀಯುತರು, ನಾಟಕ, ಬುದ್ಧನ ಜೀವನ ಚರಿತ್ರೆ ಮುಂತಾದವನ್ನು ಬರೆದು, ತಮಗಿರುವ ಅನುಭವ ಪ್ರಾತಿಭೆಗಳನ್ನು ತೋರಿಸಿಕೊಟ್ಟರು. "ಸ್ವಪ್ನವಾಸವದತ್ತ", "ಬಸವೇಶ್ವರ", "ವಿಜಯ ವಾತಾಪಿ", "ಭಕ್ತಿಭಾವುಕಿ" ನಾಟಕಗಳು ಉತ್ತಮ ಕೃತಿಗಳಾಗಿ ಮೆರೆದವು. "ವಿಪರ್ಯಾಸ" ಕವನಸಂಕಲನ, ಹರಿಹರನ ಹತ್ತು ರಗಳೆಗಳು ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಯಿತು. "ಭಾಸನಮಕ್ಕಳು" ಪುಸ್ತಕಕ್ಕೆ ದೇವರಾಜ ಬಹದ್ದೂರು ಪ್ರಶಸ್ತಿ ೧೯೭೩ ರಲ್ಲಿ ದೊರೆಯಿತು. ಸಂಸ್ಕೃತದಿಂದ ಕನ್ನಡಕ್ಕೆ ಹಲವು ಭಾಷಾಂತರಗಳನ್ನು ಮಾಡಿದರು. ಆಕಾಶವಾಣಿಯಲ್ಲಿ ಹಲವು ನಾಟಕಗಳ ಪ್ರಸಾರವೂ ನಡೆಯಿತು. ಆಗ ಆಚಾರ್ಯರಾದ ಆರ್.ಸಿ. ಹಿರೇಮಠರವರ ಮಾರ್ಗದರ್ಶನದಲ್ಲಿ ಪಿ. ಎಚ್. ಡಿ.ಗಾಗಿ "ಕೆಳದಿಯ ಅರಸರು

ಮತ್ತು ಕನ್ನಡ ಸಾಹಿತ್ಯ" ಎಂಬ ಪ್ರಬಂಧವನ್ನು ಸಾದರ ಪಡಿಸಿ ೧೯೭೧ ರಲ್ಲಿ ಪಿ.ಎಚ್.ಡಿ. ಪದವಿಯನ್ನು ಗಳಿಸಿದರು.

ಮರುಳಯ್ಯನವರು, ತಮ್ಮ ೧೮ ನೇ ವಯಸ್ಸಿನಲ್ಲಿಯೇ ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರನ್ನು ಸಂಪರ್ಶಿಸಿದ ವ್ಯಕ್ತಿ. ಆಗಲೇ ಅವರಲ್ಲಿ ರಾಷ್ಟ್ರೀಯ ಭಾವನೆ ಮೂಡಿತ್ತು. ಅನಂತರ ೧೯೪೨ ರಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗ ವಹಿಸಿ, "ಕಟ್ಟುವೆವು ಹೊಸ ನಾಡೊಂದನು" ಎಂಬ ಕಹಳೆಯನ್ನು ಊದಿದರು. "ನಾ ಭಾರತೀಯ" ಎಂಬುದೇ ಅವರ ನಿತ್ಯ ಗಾಯತ್ರಿ.

ಇಷ್ಟೆಲ್ಲಾ ಕೆಲಸ ಮಾಡಿದ ಮರುಳಯ್ಯನವರಿಗೆ ಗರ್ವವಿಲ್ಲ, ಅಹಂಕಾರ ವಿಲ್ಲ. ಯೌವನದಲ್ಲಿ ಮುಪ್ಪಿನ ಅನುಭವ ಕಂಡ ಮರುಳಯ್ಯನವರದು ಪರಿ ಪೂರ್ಣ ವ್ಯಕ್ತಿತ್ವ.



# ಶ್ರೀ ಹಂ. ಪ. ನಾಗರಾಜಯ್ಯ

ಕನ್ನಡಿಗರ ಮಹಾ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಖ್ಯಾತ ಸಾಹಿತಿ, ಸ್ನೇಹ, ಸೌಜನ್ಯ, ನಯ, ವಿನಯ, ಆತ್ಮೀಯತೆಯ ಮಹಾ ಸಂಗಮದ ಮೂರ್ತಿವೆತ್ತ ಶ್ರೀ ಹಂ. ಪ. ನಾಗರಾಜಯ್ಯನವರು ಆಯ್ಕೆಯಾಗಿದ್ದಾರೆ. ಇದು ಕನ್ನಡಿಗರಿಗೆ ಸಂತೋಷದ ಸಂಗತಿ. ಕನ್ನಡ ಸಾಹಿತ್ಯ ಪರಿಷತ್ತಿನ ಇತಿಹಾಸದಲ್ಲಿ ಶ್ರೀ ನಾಗರಾಜಯ್ಯನವರಷ್ಟು ಚಿಕ್ಕ ವಯಸ್ಸಿನ ಅಧ್ಯಕ್ಷರು ಅಧ್ಯಕ್ಷರಾಗಿರುವುದು ಇದೇ ಮೊದಲು. ಇದರಿಂದ ಶ್ರೀ ನಾಗರಾಜಯ್ಯನವರಿಗೆ ಮುಂದೆ ವಯಸ್ಸು ಏರುತ್ತದೆ, ಪರಿಷತ್ತಿಗೆ ಯೌವ್ವನ ಬರುತ್ತಿದೆ.

ಗೌರಿಬಿದನೂರಿನ ಹಂಪ ಸಮುದ್ರದಲ್ಲಿ ೧೯೩೬ ರಲ್ಲಿ ಶ್ರೀ ಹಂ. ಪ. ನಾಗರಾಜಯ್ಯನವರ ಜನನ. ಈಗ ಅವರಿಗೆ ನಲವತ್ತೆರಡು ವರ್ಷ. ಎತ್ತರವೂ ಅಲ್ಲದ ಕುಳ್ಳರೂ ಅಲ್ಲದ, ಬಿಳಿಯೂ ಅಲ್ಲದ, ಕಪ್ಪೂ ಅಲ್ಲದ, ಸಮನಾದ, ಹದನಾದ ಆಳು. ಕನ್ನಡಿಗರು ಯಾರೇ ಅವರನ್ನು ಕಾಣಲು ಬಂದರೂ, ಶೂಟುಧಾರಿಯೇ ಬರಲಿ, ಕಂಬಳಿ ಹೊಪ್ಪವನೇ ಬರಲಿ, ಎಲ್ಲರನ್ನು ಕಾಣುವುದು ಒಂದೇ ಭಾವದಿಂದ.

ಆದು ಕನ್ನಡಿಗ, ಸಹೋದರ, ನನ್ನ ಮನೆಯವನು, ಎಂಬ ಭಾವನೆಯಿಂದ ಅವರಿಗೆ ಸ್ವಾಗತ, ಆತ್ಮೀಯತೆ. ತಂದೆ, ಪದ್ಮನಾಭಯ್ಯನವರು ಮೈಸೂರಿನಲ್ಲಿ ಓದಿ, ಸಂಸ್ಕೃತವನ್ನು ಕಲಿತು, ಸಂಪ್ರದಾಯಸ್ಥರಾಗಿ, ಊರಿನ ಶಾನುಭೋಗರಾಗಿ, ಹತ್ತಾರು ಜನರಿಗೆ ಬೇಕಾಗಿದ್ದವರು. ಇವರ ಬಗ್ಗೆ ಊರಿನ ಜನರಿಗೆ ಇನ್ನಿಲ್ಲದ ಗೌರವ, ಸದ್ಭಾವನೆ. ಹಲವು ಮಕ್ಕಳು ಹುಟ್ಟಿ ಉಳಿಯದೇ ಇದ್ದಾಗ, ಹುಟ್ಟಿದ ಶ್ರೀ ಹಂ. ಪ. ನಾಗರಾಜಯ್ಯನವರು, ಚುರುಕು, ಬಲು ಚುರುಕು. ಚಿಕ್ಕಂದಿನಲ್ಲೆ ಹಲವು ವಿಷಯದ ಬಗ್ಗೆ ಅಭಿರುಚಿ. ಮಂಡ್ಯದಲ್ಲಿ ಓದುತ್ತಿರುವಾಗಲೇ ನಾಗ ರಾಜಯ್ಯನವರಿಗೆ, ಸಾಹಿತ್ಯ, ಭಾಷಣ, ನಾಟಕ, ಚರ್ಚಾಸ್ಪರ್ಧೆ, ಕ್ರೀಡೆ, ಮುಂತಾದವುಗಳಲ್ಲಿ ಇನ್ನಿಲ್ಲದ ಆಸಕ್ತಿ. ಎಲ್ಲದರಲ್ಲೂ ಬಹುಮಾನದ ಸುರಿಮಳೆ. ಇದರಿಂದ ತಂದೆ ಶ್ರೀ ಪದ್ಮನಾಭಯ್ಯನವರಿಗೆ ಸಂತೋಷ, ತೃಪ್ತಿ, ಮಗನ ಬಗ್ಗೆ ತುಂಬಾ ಆಸಕ್ತಿ.

ಅವರ ಹೆಸರೇ ಹೇಳುವಂತೆ, ಒಳ್ಳೆಯ ಕೆಲಸಕ್ಕೆ ಸೌಮ್ಯ ಸ್ವಭಾವ. ತಮ್ಮ ವೈಯಕ್ತಿಕ ಸ್ವಾಭಿಮಾನಕ್ಕಾಗಲಿ, ಕನ್ನಡದ ಸ್ವಾಭಿಮಾನಕ್ಕಾಗಲಿ, ಧಕ್ಕೆ ಬರುತ್ತದೆ ಎಂದರೆ ನಾಗರಾಜರಾಗುತ್ತಾರೆ, ಸರ್ಪವಾಗುತ್ತಾರೆ. ಎಲ್ಲ ಹಂತಗಳಲ್ಲೂ ಕನ್ನಡದ ಭಾಷೆಯನ್ನ ಆಡಳಿತ ಭಾಷೆಯಾಗಿ ಮಾಡದಿದ್ದರೆ, ಕನ್ನಡ ರಾಜ್ಯೋತ್ಸವ ಆಚರಿಸು ವುದು ಅರ್ಥವಿಲ್ಲದ್ದು ಎಂದು ಗುಡುಗಿ ಸರ್ಕಾರದಿಂದ ಭರವಸೆ ಪಡೆದುಕೊಂಡ ಭೂಪ. ಅಚ್ಚ ಕನ್ನಡಿಗ, ರಾಷ್ಟ್ರಪ್ರಿಯ, ತೀ. ನಂ. ಶ್ರೀಯವರ ಪರಮ ಶಿಷ್ಯ.

ಶ್ರೀ ಹಂ.ಪ.ನಾ. ರವರಿಗೆ ಇನ್ನಿಲ್ಲದ ಹುರುಪು. ನಾಳೆ ಆಗಬೇಕಾದ ಕೆಲಸ ಇಂದೇ ಆಗಬೇಕು, ನಾಳೆ ಅಂದರೆ ಅದು ಘಟಾರಕ್ಕೆ ಹೋಗುತ್ತದೆ ಎಂಬ ಭಾವನೆ. ಮಾಸ್ತಿಯವರ ಬಗ್ಗೆ ಗೌರವ, ಗೋಕಾಕರ ಬಗ್ಗೆ ಭಕ್ತಿ, ಅಡಿಗರ ಬಗ್ಗೆ ಆತ್ಮೀಯತೆ ಡಿ.ವಿ.ಜಿ., ವೀಸೀಯವರ ಬಗ್ಗೆ ಕೂಡ ಅಷ್ಟೆ. ಅದೇ ಗೌರವ, ಅದೇ ಭಾವನೆ. ೧೯೫೫ ರಲ್ಲಿ ಎಂ. ಎ. ಪದವಿ, ಕೂಡಲೇ ಕನ್ನಡ ಅಧ್ಯಾಪಕರಾಗಿ ನೇಮಕ, ಮೈಸೂರು, ಮಂಡ್ಯ, ದಾವಣಗೆರೆ, ಶಿವಮೊಗ್ಗಾದಲ್ಲಿ ಅಧ್ಯಾಪಕ ವೃತ್ತಿ. ಶಿವಮೊಗ್ಗೆಯಿಂದ ಬೆಂಗಳೂರಿಗೆ ಹೀಗೆ ಹಲವು ಊರುಗಳ ಸಂಪರ್ಕ ಹೋದಲ್ಲೆಲ್ಲಾ ಹೋದ ಕಡೆಗೆಲ್ಲಾ, ಕನ್ನಡ ಸಾಹಿತ್ಯ ಪ್ರಸಾರದ ಬಗ್ಗೆ ಪುಂಗಿ. ವಿದ್ಯಾರ್ಥಿ ಗಳನ್ನ ಸಾಹಿತ್ಯದ ಕಡೆ ಆಸಕ್ತಿ ಹುಟ್ಟಿಸಲು ಪ್ರಯತ್ನ, ನಾಟಕ, ಕ್ರೀಡೆ ಎಲ್ಲದರಲ್ಲೂ ತಲೆಗೆ ಹುಚ್ಚು ಹಿಡಿಸುವ ಮಹಾ ಮಾಂತ್ರಿಕ. ನಾಗರಾಜಯ್ಯನವರು ಕನ್ನಡದ ನಗಾರಿ ಹೊಡೆದರೆಂದರೆ, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಶಿಷ್ಯಕೋಟಿಯ ಜಮಾವಣೆ.

ವಿದ್ಯಾರ್ಥಿಗಳಿಗೆ ಜನಪ್ರಿಯ ಅಧ್ಯಾಪಕ, ನಾಗರಾಜಯ್ಯರಿರುವ ವಿಭಾಗ ಗಲಭೆ ಇಲ್ಲ, ಅಶಾಂತಿ ಇಲ್ಲ, ಇದೊಂದು ಸವಾಡ.

ಬಾಲ್ಯದಿಂದಲೂ ಬರೆಯುತ್ತಾ ಬಂದ ಹಂ.ಪ.ನಾ.ರವರಿಗೆ ಸಾಹಿತ್ಯ ಒಂದು ಸಿದ್ಧ ಹಸ್ತ. ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಪ್ರಬಂಧ, ಸಂಶೋಧನಾ, ಸಾಹಿತ್ಯ, ವಿಜ್ಞಾನ ಹೀಗೆ ಹಲವು ವಿಷಯಗಳನ್ನು ಕುರಿತು, ಮೂವತ್ತೈದಕ್ಕೂ ಹೆಚ್ಚಿನ ಕೃತಿಗಳ ರಚನೆ; ಮಕ್ಕಳ ಸಾಹಿತ್ಯ ಕೂಡ ಬರೆದು ಮುಂದಿನ ಪ್ರಜೆ ಗಳಿಗೆ ಸೂಕ್ತ ಮಾರ್ಗದರ್ಶನ ಮಾಡಿದರು. ಇವರ "ದ್ರಾವಿಡ ಭಾಷಾ ವಿಜ್ಞಾನ" ಎಂಬ ಕೃತಿ ಇವರ ವ್ಯಕ್ತಿತ್ವದ ಎತ್ತರವನ್ನು ಎತ್ತಿ ತೋರಿಸಿದ ಮಹಾಕೃತಿ. ಎಲ್ಲರ ಮೂಗಿನ ಮೇಲೂ ಬೆರಳಿಡುವಂತೆ ಮಾಡಿದ ದೊಡ್ಡ ಸಾಧನೆ. ಇವರ "ಭಾರತದ ಭಾಷಾ ಸಮಸ್ಯೆ" ಭಾಷೆ ಭಾಷಾವಿಜ್ಞಾನಿಗಳು "ದ್ರಾವಿಡ ಭಾಷಾ ಸಂಬಂಧ" ಪಂಪಭಾರತ ಸಂಗ್ರಹ, ನಾಗಶ್ರೀ, ಭರತೇಶ ವೈಭವ, ಸವ್ಯಸಾಚಿ ಪಂಪ ಮುಂತಾದ ಕೃತಿಗಳಿಂದ ಹಂ.ಪ.ನಾಗರಾಜಯ್ಯನವರನ್ನು ಕನ್ನಡಿಗರು, ಬಹು ಎತ್ತರದ ಮನಸ್ಸಿನಿಂದ ಗೌರವಿಸಲು ಸಾಧನವಾಯಿತು. ಕನ್ನಡ ನಾಡಿನ ಉದ್ದಗಲಕ್ಕೂ ಅಲ್ಲದೆ, ನಾಡಿನ ಹೊರಗೂ ಪ್ರವಾಸ ಮಾಡಿ ತಮ್ಮ ವಿಚಾರ ಸರಣಿಯನ್ನು ಮಂಡಿಸಿ, ಸೈ ಎನಿಸಿಕೊಂಡ ಧೀರ.

ಶ್ರೀ ಹಂ. ಪ. ನಾಗರಾಜಯ್ಯನವರಿಗೆ ಸಿಕ್ಕಿದ ಪ್ರಶಸ್ತಿಗಳು, ಗೌರವಗಳು, ಪದಕಗಳು, ಮಾನಪತ್ರಗಳು, ಸನ್ಮಾನಗಳು ಬೇರೆಯವರನ್ನ ದಿಗಿಲು ಗೊಳಿಸುವಷ್ಟು ಸಿಕ್ಕಿದವು. ಆದರೂ ಈ ಸೌಮ್ಯಮೂರ್ತಿ, ಎದೆ ಚಾಚಿ ನಡೆದಿಲ್ಲ. ಮನೆಯಲ್ಲಿ ಇಲ್ಲವೆನ್ನಿಸಿಕೊಳ್ಳಲಿಲ್ಲ, ಬೇರೆಯವರನ್ನ ಕಂಡರೂ ಕಾಣದಂತೆ ನಡೆದಿಲ್ಲ. ಇದು ಇವರ ಜೀವನದಲ್ಲಿ ಬೆಳೆದು ನಿಂತ ಬಹು ದೊಡ್ಡ ಗುಣ.

ಶ್ರೀ ಹಂ.ಪ. ನಾಗರಾಜಯ್ಯನವರು ಜಾತಿಯಲ್ಲಿ ಜೈನರು, ಮದುವೆ ಆದದ್ದು ಗಿರಿಜನರ ಕನ್ಯೆಯನ್ನು. ತಮ್ಮ ಓದುವಿಕೆಯಿಂದ ಹಲವು ವರ್ಷಗಳ ಸಂಗಾತಿಯಾದ ಶ್ರೀಮತಿ ಕಮಲಾರವರೊಡನೆ ಪ್ರೀತಿಯ ವಿವಾಹ ಇದರಿಂದ ಮನೆಯ ಹಿರಿಯರಿಗೆಲ್ಲ ಕಸಿಪಿಸಿ. ಬಾಳ ಸಂಗಾತಿ, ಶ್ರೀಮತಿ ಕಮಲಾರವರು ಹಂ. ಪ. ನಾ.ರವರಂತೆ, ಸಾಹಿತಿ, ಮಾತು ಬಲ್ಲವರು. ಮಹಾರಾಣಿ ಕಾಲೇಜಿನಲ್ಲಿ ಅಧ್ಯಾಪಕಿ. ಜೊತೆ. ಅಂದರೆ ಬೇರೆಯವರು ಹುಬ್ಬು ಮೇಲೇರಿಸುವಷ್ಟು ಅನ್ಯೋನ್ಯ ಜೀವನ.

ಸುಮಾರು ಒಂಬತ್ತು ವರ್ಷಗಳ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಯಾಗಿದ್ದು, ಕನ್ನಡ ಸಾಹಿತ್ಯ ಪರಿಷತ್ತಿನ ಕಿಟಕಿ, ಬಾಗಿಲು

ಗಳ ಲೆಖ್ಖವೂ ಗೊತ್ತು, ಯಾವ ಕಿಟಕಿಯಲ್ಲಿ ಯಾವ ಗಾಳಿ ಬರುತ್ತದೆ ಎಂಬುದೂ ಗೊತ್ತು. ಅಂತೆಯೇ ಎಲ್ಲ ಬಾಗಿಲುಗಳಿಂದ ಒಳನುಗ್ಗುವ ಜನರ ಪರಿಚಯವೂ ಉಂಟು. ಹೀಗಿರುವಾಗ ಪರಿಷತ್ತಿನ ಅಧ್ಯಕ್ಷ ಸ್ಥಾನ ಸುಲಿದ ಬಾಳೆಯ ಹಣ್ಣು. ಹೂವಿನ ಮಾಲೆಯಷ್ಟು ಹಗುರ.

ಶ್ರೀ ಹಂ.ಪ.ನಾ. ಮಾತಿಗೆ ನಿಂತರೆ ನಿರರ್ಗಳ. ಹೊತ್ತು ಏರಿದ್ದು, ಹೊತ್ತು ಮುಳುಗಿದ್ದು ಒಂದೂ ಗೊತ್ತಿಲ್ಲ. ಜನ ಸ್ತಬ್ಧವಾಗಿ ಇವರ ಮಾತಿನ ಕಡೆಗೆ ಗಮನ. ಮಾತಿನಲ್ಲಿ ನಯವೂ ಉಂಟು, ಗಡಸೂ ಉಂಟು, ಶಬ್ದ ಸಂಪತ್ತಿಗಾಗಲಿ ಮಾತಿನ ಓಗಕ್ಕಾಗಲಿ ಕಡಿಮೆಯಿಲ್ಲ. ಇವರ ಭಾಷಣ ಕೇಳುವುದೆಂದರೆ ಹೋಳಿಗೆ ಊಟ ಉಂಡಷ್ಟು ಸಂತೋಷ. ಪಾಯಸ ಕುಡಿದಷ್ಟು ಆನಂದ. ಕನ್ನಡ ಸಾಹಿತ್ಯ ಪರಿಷತ್ತು ಈಗ ಎಲ್ಲ ಕನ್ನಡಿಗರ ಸೊತ್ತು. ಕನ್ನಡಿಗರಿಗೆ ಈಗ ಪರಿಷತ್ತು ನನ್ನದೆಂಬ ಭಾವನೆ.



# ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳು

ನಮ್ಮ ದೇಶದ ಚರಿತ್ರೆಯಲ್ಲಿ ಮಠಾಧಿಪತಿಗಳದೊಂದು ಸಂಧಿ ಕಾಲ, ರಾಜಕಾರಣಿ ಹೇಳಿ ಬಿಟ್ಟ ಮಾತನ್ನೇ, ಮಠಾಧಿಪತಿಗಳು ಪುನರುಚ್ಚರಿಸಿದರೆ ಅದೊಂದು ವಿಪತ್ಕಾಲ; ರಾಜಕಾರಣಿ ದೇಶದ ಒಗ್ಗಟ್ಟನ್ನು ಮುರಿದರೂ ಅದೊಂದು ಸುದ್ದಿಯ ಮಾತಲ್ಲ. ಅದೇ ಮಠಾಧಿಪತಿಗಳು, ಸ್ವಲ್ಪ ಸ್ವಾತಂತ್ರ್ಯದ ಮಾತನ್ನು ಆಡಿದರೆ, ಅದು ಬಹು ವಿಶಾಲದ ಸುದ್ದಿ; ವಿಪರೀತ ಸುದ್ದಿ! ವಿಶ್ವದ ಸಮಸ್ತ ವಿಚಾರಗಳನ್ನು ಪ್ರತಿದಿನವೂ ತಿಳಿದು, ತಮ್ಮ ಅಭಿಪ್ರಾಯವನ್ನು ಬಹಿರಂಗಪಡಿಸದೇ, ವಿಶ್ವಕಲ್ಯಾಣವನ್ನು ಸಾಧಿಸುವುದೇ ಅತಿ ಉತ್ತಮ ಕೆಲಸ, ಇದನ್ನು ಮನಗಂಡವರು ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರು.

ಶಿವಮೊಗ್ಗ ಜಿಲ್ಲೆಯ, ಸಾಗರ ತಾಲ್ಲೂಕಿನ, “ಮಾಗಲು” ಎಂಬಲ್ಲಿ ಶ್ರೀ ರಾಘವೇಂಪ್ರ ಭಾರತೀ ಸ್ವಾಮಿಗಳವರ ಜನನ, ಭೋದಾಯನ ಸೂತ್ರ, ವಶಿಷ್ಠ ಗೋತ್ರದ ಶ್ರೀಗಳವರು, ವಿಪ್ರೋತ್ತಮ ಗಣಪತಿ ಭಟ್ಟರ ಪುತ್ರರು. ಬಾಲ್ಯದಲ್ಲಿಯೇ ವೈರಾಗ್ಯ, ತಂದೆ ಚಂಡಿಕಾ ಉಪಾಸಕರು. ಮೂವತ್ತು ವರ್ಷಗಳ ಹಿಂದೆ ಶ್ರೀ ರಾಮಚಂದ್ರಾಪುರ ಮಠದ ಶ್ರೀಗಳವರಾಗಿ ದೀಕ್ಷೆ. ತಂಜಾವೂರು, ಸಂಜನಗೂಡು

ಕಾಶೀ ಕ್ಷೇತ್ರದಲ್ಲಿ ಉನ್ನತ ವಿದ್ಯಾಭ್ಯಾಸ, ಕನ್ನಡ, ಸಂಸ್ಕೃತ, ಹಿಂದಿ, ತಮಿಳು, ಮಲಿಯಾಳೀ ಭಾಷೆಗಳಲ್ಲಿ ಮಹಾಪ್ರಭುತ್ವ. ತರ್ಕ, ವ್ಯಾಕರಣ, ಸಾಂಖ್ಯ, ವೇದಾಂತ ಮೀಮಾಂಸೆಗಳಲ್ಲಿ ಮಹಾಪಾಂಡಿತ್ಯ. ಶಿಷ್ಯರನ್ನು ಸಂತೈಸುವ, ಜನರನ್ನು ಮುಗ್ಧಗೊಳಿಸುವ ಮಹಾಮಾಂತ್ರಿಕತನ. ಕಟು ವಿರೋಧಿಗಳನ್ನು ಕ್ಷಣಮಾತ್ರದಲ್ಲಿ ಪಳಗಿಸುವ ಪವಾಡ, ಸ್ವಚ್ಛತೆ, ಚಾರಿತ್ರ್ಯತೆ, ಸರಳತೆ, ಸೌಜನ್ಯತೆ ಇವೆಲ್ಲವುಗಳ ಮಹಾಸಂಗಮ.

ಶ್ರೀಗಳವರೊಡನೆ ಲೌಕಿಕ ಮಾತನಾಡುವುದೊಂದು ಸಂಭ್ರಮ. ರಾಮ, ಕೃಷ್ಣ, ಶಂಕರ, ಚಂದ್ರಮೌಳಿ, ಆದಿಗುರು ಹಾಗೂ ದೇವತೆ—ಇವರಿಂದ ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರ ಪ್ರಸನ್ನತೆ, ನಾಡಿನ ಉದ್ದಗಲಕ್ಕೂ ಪ್ರವಾಸ, ಅದರಿಂದ ಅಪಾರ ಅನುಭವ. ಮಾಗಿದ ಮನಸ್ಸು, ಸಮಾಜದ ಉದ್ಧಾರಕ್ಕಾಗಿ ಚಿಂತನೆ, ಭಾರತೀಯ ಸಂಸ್ಕೃತಿಗಾಗಿ ಹಿತಚಿಂತನೆ, ರಾಮಕೃಷ್ಣ ಪರಮಹಂಸ, ಸ್ವಾಮಿವಿವೇಕಾನಂದ, ಅರವಿಂದ, ಬಸವಣ್ಣ ಇವರೆಲ್ಲರ ವಿಚಾರಧಾರೆಗೆ ಮನ್ನಣೆ. ಗುರು, ಶಂಕರಾಚಾರ್ಯರ ತತ್ವಪಾಲನೆ, ತಮ್ಮ ನಿತ್ಯ ಜೀವನದಲ್ಲಿ ಸದಾ ಆಚಾರ, ದೇಶದ ಇಂದಿನ ಸಮಸ್ಯೆಯ ಬಗ್ಗೆ ಸದಾ ವಿಚಾರ, ಇದು ಶ್ರೀ ರಾಘವೇಂದ್ರ ಭಾರತೀ ಸ್ವಾಮಿಗಳವರಲ್ಲಿ ಕಾಣಬಹುದಾದ ವಿಶೇಷ ಲಕ್ಷಣ. ಆದರ್ಶ ವ್ಯಕ್ತಿತ್ವ, ಎಲ್ಲ ಮಠಾಧಿಪತಿಗಳಲ್ಲೂ ಸಮಸುಖಿ; ಸಮದುಃಖಿ, ಸಮ ಭಾವನೆಯಿಂದ ಕಾಣುವ ವಿಶಾಲ ಹೃದಯ, ಸನಾತನಧರ್ಮ, ಧಾರ್ಮಿಕ ಪ್ರಚಾರದಿಂದ, ಜಗತ್ ಕಲ್ಯಾಣಸಾಧನೆ ಶ್ರೀ ರಾಮಚಂದ್ರಾಪುರ ಮಠದ ಮೂವತ್ತೈದನೇ ಶ್ರೀಗಳವರಾಗಿ ಪಟ್ಟಾಭಿಷೇಕ. ಇದರಿಂದ ಶಿಷ್ಯ ವರ್ಗಕ್ಕೊಂದು ಆನಂದಾಭಿಷೇಕ.

ಶ್ರೀ ಸ್ವಾಮೀಜಿಯವರು ಮಠದ ಶ್ರೀಗಳಾಗಿ ಬಂದನಂತರ ನಡೆಸಿದ ಕಾರ್ಯ ಮಹತ್ತರ ಪವಾಡ. ನಶಿಸಿ ಹೋಗಿದ್ದ ಮಠಗಳ ಜೀರ್ಣೋದ್ಧಾರ, ಹಾಳಾಗಿದ್ದ ಆಸ್ತಿಯ ಪುನರುದ್ಧಾರ, ಸಣ್ಣ ಪುಟ್ಟ ಮಠಗಳ ವಿಲೀನೀಕರಣ, ಗುರು ಶಿಷ್ಯರಲ್ಲಿ ವಿಶೇಷ ಬಾಂಧವ್ಯ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆ. ವಿದ್ಯಾಸಂಸ್ಥೆಗಳಿಗೆ ಕೈತುಂಬ ಕೊಡುಗೆ, ಧಾರ್ಮಿಕ ಪ್ರವಚನ, ಆಧ್ಯಾತ್ಮಿಕ ಉಪನ್ಯಾಸ, ಮಠದಲ್ಲಿ ದಿನನಿತ್ಯ ದಾಸೋಹ, ಶ್ರೀ ರಾಮಚಂದ್ರಾಪುರ ಮಠದಲ್ಲಿ ನಾಲ್ಕು ಲಕ್ಷ ರೂಪಾಯಿ ವೆಚ್ಚದಲ್ಲಿ ದಿವ್ಯ, ಭವ್ಯ, ಸುಂದರ ಮಠದ ನಿರ್ಮಾಣ. ಇವೆಲ್ಲವೂ ಶ್ರೀಗಳವರು, ತಮ್ಮ ಪ್ರಭಾವದಿಂದ ನಡೆಸಿದ ಮಹತ್ ಸಾಧನೆ. ಸರ್ವಧರ್ಮವೂ ಒಂದೇ ಎಂಬ ಭಾವನೆಯುಳ್ಳ ಆಧುನಿಕ ಜಗತ್ತಿಗೆ ತಕ್ಕರೀತಿಯಲ್ಲಿ ವ್ಯವಹರಿಸುವ ವ್ಯವಹಾರ ಕುಶಲತೆ, ಕಲೆ, ಸಾಹಿತ್ಯ, ನಾಟಕ ಇದರ ಬಗ್ಗೆ ಅಪಾರ ಆಸಕ್ತಿ.

ಸಾರ್ವಜನಿಕ ಸಮಾರಂಭಗಳಲ್ಲಿ ನಿರರ್ಗಳವಾಗಿ ಮಾತನಾಡುವ ಕುಶಾಗ್ರ ಬುದ್ಧಿ, ಹಾಗೂ ಆತ್ಮಶಕ್ತಿ, ಇದು ಶ್ರೀಗಳವರ ವೈವಿಧ್ಯಮಯ ರೂಪ. ಇದೆಲ್ಲವನ್ನು ಸಾಧಿಸಿರುವವರು ಬಹು ಅಪರೂಪ. ಹಿಂದಿನ ಮೂವತ್ತನಾಲ್ಕು ಗುರುವರೇಣ್ಯರು ಹತ್ತಿಸಿದ ದೀಪ, ಹಾಕಿದ ಎಣ್ಣೆ, ಇಂದು ನಂದಾ ದೀಪವಾಗಿ ಬೆಳಗುತ್ತಿದೆ. ಸಾಧನೆಯ ಸಿದ್ಧಿಯ ಹಸಿರು ಕಂಡು ಶಿಷ್ಯಕೋಟಿ, ಸಂತಸದಿಂದ ನಲಿಯುತ್ತಿದೆ. ಯಥಾ ಗುರು ತಥಾ ಶಿಷ್ಯ ಎಂಬ ನಾಡ ನುಡಿಯಂತೆ ಗುರುವಿನ ಪ್ರಭಾವದಿಂದ ಶಿಷ್ಯ ಜನಕೋಟಿ ಇಂದು ಎಚ್ಚರಗೊಂಡು ಕರ್ತವ್ಯ, ಕಾರ್ಯೋನ್ಮುಖರಾಗಿದ್ದಾರೆ, ಮಲೆನಾಡಿನ ಭಾಗದಲ್ಲಿಯೇ ಏಕೆ, ಈ ನಾಡಿನಲ್ಲಿಯೇ ಆದರ್ಶ ಗುರುವರೇಣ್ಯರಾಗಿದ್ದಾರೆ.

ನಿಷ್ಠೆಯ ಜಡತ್ವದಲ್ಲಿರುವ ಜನರನ್ನು ಸದಾ ಎಚ್ಚರಿಸಿ, ಕಾರ್ಯಕ್ಕೆ ಹಚ್ಚಿ, ಕಾಯಕವೇ ಕೈಲಾಸ ಎನ್ನುವಂತೆ, ಅವರನ್ನು ಸದಾ ಎಚ್ಚರಗೊಳಿಸುತ್ತಾರೆ. ಈ ದೇಶ ದೊಡ್ಡದು, ಈ ದೇಶದಲ್ಲಿ ದೊಡ್ಡ ಜನರ ಸೃಷ್ಠಿಯಾಗಬೇಕು. ಆಗ ಸಖೀ ರಾಜ್ಯವನ್ನು ಕಾಣುವುದು ಸುಲಭ ಎಂದು, ಆಗಾಗ ಜನರನ್ನು ಎಚ್ಚರಿಗೊಳಿಸುತ್ತಾರೆ. ಜನರನ್ನು ದೊಡ್ಡವರನ್ನಾಗಿ ಮಾಡಲು ಸನ್ಮಾರ್ಗಕ್ಕೆ ಎಳೆಯುತ್ತಾರೆ. ನೀತಿ ಬೋಧಿಸುತ್ತಾರೆ. ಮಾತಿನ ಜಾಲದಲ್ಲಿ, ಜನರನ್ನು ಬೇರೊಂದು ಪ್ರಪಂಚಕ್ಕೆ ಒಯ್ಯುತ್ತಾರೆ, ಇವರ ವ್ಯಕ್ತಿತ್ವದ ಪೂರ್ಣ ಅರಿವು ಆಗಬೇಕಾದರೆ, ಅವರೊಡನೆ ದೀರ್ಘ ಸಂಭಾಷಣೆಯ ಸಂದರ್ಭವನ್ನು ಒದಗಿಸಿಕೊಳ್ಳಬೇಕು. ವೇದಿಕೆಯ ಮೇಲೆ ಬಂದಾಗ, ಅವರ ಅಸಾಮಾನ್ಯ ವ್ಯಕ್ತಿತ್ವದ ಸಂಪೂರ್ಣ ಅರಿವು ಆಗುತ್ತದೆ.

ರಾಷ್ಟ್ರದಲ್ಲಿ ಇಂದು ನಡೆಯುತ್ತಿರುವ, ವಿಧ್ವಂಸಕ ಕೃತ್ಯಗಳ ಬಗ್ಗೆ ಶ್ರೀಗಳವರು, ಅತ್ಯಂತ ಕಳಕಳಿಯ ಭಾವನೆಯನ್ನು ವ್ಯಕ್ತಪಡಿಸುತ್ತಾರೆ. ವಿದ್ಯಾರ್ಥಿಗಳ ಮುಷ್ಕರ, ಬಸ್ಸಿಗೆ ಬೆಂಕಿ, ರೈಲ್ವೆಯ ದುರಂತ, ಬೀದಿ ದೀಪಗಳ ಒಡೆಯುವಿಕೆ, ಇದು ನಮ್ಮ ರಾಷ್ಟ್ರದ ಜನ ಮಾಡಬಹುದಾದ ಕೆಲಸವಲ್ಲ. ರಾಷ್ಟ್ರದ ಏರು ಗೋಪುರವನ್ನು ಕೆಳಕ್ಕಿಳಿಸುವುದು, ಸಜ್ಜನರು ಮಾಡಬಹುದಾದ, ನಡವಳಿಕೆಯಲ್ಲ. ನಾಡನ್ನು ಒಡೆಯುವುದು, ಭಾಷಾ ಸಮಸ್ಯೆಗೆ ವಿಪರೀತ ಕಲ್ಪನೆ ಕೊಡುವುದು, ಶೀತಲ ಯುದ್ಧವನ್ನು ಎಬ್ಬಿಸುವುದು - ಇದು ರಾಷ್ಟ್ರದ ಪ್ರಗತಿಗೆ ಕಳಂಕ.

ವಿದ್ಯಾಕ್ಷೇತ್ರದಲ್ಲೂ, ವಿಚಾರ ಲೋಕದಲ್ಲೂ ಶ್ರೀಗಳವರು ಇಟ್ಟಿರುವ ಅಭಿಮಾನ ಹೆಚ್ಚಿನದು. ಇವರ ನಡೆ, ನುಡಿ, ಮಾರ್ಗದರ್ಶನ ಶಿಷ್ಯಕೋಟಿಗೆ ಮೆಚ್ಚಿನದು.

"ಕನ್ನಡ" ಭಾಷೆ, ಹಾಗೂ ಸಾಹಿತ್ಯ ಸಮೃದ್ಧವಾಗಿ ಬೆಳೆಯಬೇಕೆಂಬುದೇ ಶ್ರೀಗಳವರ ಅಭಿಲಾಷೆ. ಕನ್ನಡ ನಾಡಿನ ಎಲ್ಲ ವಿಶ್ವವಿದ್ಯಾನಿಲಯಗಳಲ್ಲೂ ಕನ್ನಡ ಮಾಧ್ಯಮವಾಗಬೇಕು. ನಮ್ಮ ಜನ ತನ್ನ ತನವನ್ನು ಕಂಡುಕೊಳ್ಳಬೇಕು ಎಂಬುದೇ ಅವರ ಗುರಿ.



# ಶ್ರೀ ತ. ರಾ. ಸುಬ್ಬರಾವ್

ತ. ರಾ. ಸುಬ್ಬರಾವ್ ಎಂಬ ಹೆಸರಿಗೂ, ತ. ರಾ. ಸು. ಎಂಬ ಹೆಸರಿಗೂ ನಿಕಟ ಸಂಪರ್ಕ. ಕನ್ನಡಿಗರಿಗೆ ಸಾಹಿತಿ, ತ.ರಾ. ಸುಬ್ಬರಾವ್ ಎನ್ನುವುದಕ್ಕಿಂತ, ತ. ರಾ. ಸು. ಎನ್ನುವುದೇ ಅತ್ಯಂತ ಪ್ರಿಯವಾದ ಹೆಸರು. ನಾಡಿನಲ್ಲಿ ಜನಪ್ರಿಯ ಗಳಿಸಿದ ಹೆಸರೂ ಕೂಡ ಹೌದು, ಕಾದಂಬರೀ ಕ್ಷೇತ್ರದಲ್ಲಿ, ತ.ರಾ.ಸು. ಹೆಸರು, ಎತ್ತರ, ಬಹು ಎತ್ತರ. ಮಾತಿಗೆ ನಿಂತರೂ ಕೂಡ, ಗುಡುಗು, ಸಿಡಿಲುಗಳ ಆರ್ಭಟ. ಸಭೆಯಲ್ಲಿ ಇದ್ದವರಿಂದ ಚಪ್ಪಾಳೆಯ ಸುರಿಮಳೆ, ಭಲಿರೇ ಎಂಬ ಕೂಗು. ಮೂವತ್ತು ವರ್ಷಕ್ಕೂ ಹೆಚ್ಚಿನ ಸಾಹಿತ್ಯ ಸೇವೆ.

ತ. ರಾ. ಸು. ಹುಟ್ಟಿದ್ದು ಐತಿಹಾಸಿಕ ಜಿಲ್ಲೆಯಾದ ಚಿತ್ರದುರ್ಗ ಜಿಲ್ಲೆಯಲ್ಲಿ. ಇವರ ತಂದೆ ತಾತ, ಎಲ್ಲರೂ ಸಾಹಿತ್ಯ ರಚಿಸಿದ ಮಹಾವಂಶ. ಆದರಲ್ಲಿ ಹುಟ್ಟಿದ ಈ ಸಿಂಹಕ್ಕೆ ಬರವಣಿಗೆಯೇ ಒಂದು ಆಸ್ತಿ. ಚಿತ್ರದುರ್ಗ, ಬೆಂಗಳೂರುಗಳಲ್ಲಿ ವಿದ್ಯಾಭ್ಯಾಸ, ಸ್ವಾತಂತ್ರ್ಯ ಹೋರಾಟದಲ್ಲಿ ಪ್ರವೇಶ. ದೇಶದ ಬಗ್ಗೆ ಅಪಾರ ಪ್ರೇಮ. ಸಾಹಿತ್ಯ ಹಾಗೂ ರಾಜಕಾರಣದಲ್ಲಿ ತುಂಬಾ ಆಸಕ್ತಿ. ಕೆಲವರಿಗೆ ಹತ್ತು ಹೇಳಿದರೆ ಒಂದನ್ನೋ ಎರಡನ್ನೋ ಗ್ರಹಿಸುತ್ತಾರೆ. ತ. ರಾ. ಸು.ರವರಿಗೆ

ಒಂದು ಅಥವಾ ಎರಡು ಹೇಳಿದರೆ ಸಾಕು ಹತ್ತನ್ನು ಗ್ರಹಿಸುವಷ್ಟು ಕುಶಾಗ್ರ ಬುದ್ಧಿ. ತ. ರಾ. ಸು. ಮಲಗಿದರೂ ಚಿನ್ನ, ಕೂತರೂ ಚಿನ್ನ, ನಿಂತರೆ ಬಲು ಚಿನ್ನ ಎಂಬ ಚಿತ್ರದುರ್ಗದ ಜನ ಹೇಳುವ ಮಾತು ಅಕ್ಷರಶಃ ನಿಜ.

ಕತೆ, ಕಾದಂಬರಿ, ನಾಟಕ, ಜೀವನಚರಿತ್ರೆ ಮುಂತಾದ ಪುಸ್ತಕಗಳನ್ನು ಬರೆದರೂ, ತ. ರಾ. ಸು. ಹೆಸರಾದುದು ಕಾದಂಬರೀ ಕ್ಷೇತ್ರದಲ್ಲಿ. ಚಿತ್ರದುರ್ಗದ ಇತಿಹಾಸದ ಮೇಲೆ ತುಂಬು ಬೆಳಕನ್ನು ಬೀರುವ ಶ್ರೇಷ್ಠ ಕಾದಂಬರಿ "ಕಂಬನಿಯ ಕುಯಿಲು", ರಕ್ತರಾತ್ರಿ, ತಿರುಗುಬಾಣ, ಹೊಸಹಗಲು, ವಿಜಯೋತ್ಸವ ಕಾದಂಬರಿಗಳು ಇತಿಹಾಸದ ಕಾದಂಬರಿಗಳಲ್ಲೇ ಒಂದು ಮೈಲಿಗಲ್ಲಾಗಿ ನಿಂತವು. ಎರಡು, ಮೂರು, ನಾಲ್ಕನೇ ಮುದ್ರಣವನ್ನು ಕಂಡವು. ವೇಶ್ಯಾ ಜೀವನದ ಮೇಲೆ "ಕ್ಷ" ಕಿರಣ ಬೀರುವಲ್ಲಿ ಇವರ "ಮಸಣದ ಹೂ" ಕಾದಂಬರಿ ಶೈಲಿಯಲ್ಲೂ ಕಥೆ ಹೇಳುವ ವಿಧಾನದಲ್ಲೂ ಓದುಗರ ಸೆರೆಹಿಡಿಯಿತು. ನಾಲ್ಕು ಮುದ್ರಣವನ್ನು ಕಂಡಿತು. ವಿಮರ್ಶಕರಿಂದ ಅಂದು ಬಂದ ಸಾಮಾಜಿಕ ಕಾದಂಬರಿಗಳಲ್ಲೇ ಅತ್ಯುತ್ತಮ ಕಾದಂಬರಿಯೆಂದು ಹೆಸರು ಪಡೆಯಿತು. ಇವರ ಮತ್ತೊಂದು ಐತಿಹಾಸಿಕ ಕಾದಂಬರಿ "ನೃಪತುಂಗ" ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಯಿತು. "ಸರ್ಪಮತ್ಸರ" "ಎರಡು ಹೆಣ್ಣು ಒಂದು ಗಂಡು" "ನಾಗರಹಾವು" ಕಾದಂಬರಿಗಳು, ಚಲನಚಿತ್ರವಾಯಿತು. ಅರವತ್ತಕ್ಕೂ ಹೆಚ್ಚು ಪುಸ್ತಕಗಳು ಪ್ರಕಟವಾಗಿ, ತ. ರಾ. ಸು. ಬರಹವೆಂದರೆ ಜನ ಸದಾ ಅಪೇಕ್ಷೆ ಪಡುವ ವಸ್ತುವಾಯಿತು.

ತ. ರಾ. ಸು.ರವರಿಗೆ ಪತ್ರಿಕೋದ್ಯಮದ ಬಗ್ಗೆ ವಿಶೇಷ ಆಸಕ್ತಿ. ಪ್ರಜಾವಾಣಿಯ ಸಂಪಾದಕ ಮಂಡಳಿಯಲ್ಲಿ ಕೆಲವು ವರ್ಷ ಕೆಲಸ ಮಾಡಿದರು. ಸ್ವತಂತ್ರ ಸ್ವಭಾವದ ತ.ರಾ.ಸು.ರವರಿಗೆ, ಜೀ ಹುಜೂರು ಎನ್ನುವುದು ಅವರ ಜಾಯಮಾನದಲ್ಲೇ ಎಂದೂ ಸುಳಿದಿಲ್ಲ. ವ್ಯಕ್ತಿ ಸ್ವಾತಂತ್ರ್ಯಕ್ಕಾಗಲಿ, ರಾಷ್ಟ್ರದ ಸ್ವಾತಂತ್ರ್ಯಕ್ಕಾಗಲಿ, ಧಕ್ಕೆ ಬಂದಾಗ ಪ್ರಬಲ ಸಿಂಹವಾಗುತ್ತಾರೆ, ಅರ್ಭಟಿಸುತ್ತಾರೆ. ಪತ್ರಿಕೆಗಳಲ್ಲಿ ಬರವಣಿಗೆ ಆ ಬಗ್ಗೆ ಪ್ರಾರಂಭವಾಗುತ್ತದೆ. ಒಮ್ಮೆ ತಮ್ಮ ಕಾದಂಬರಿ ನಾಗರಹಾವು ಚಲನ ಚಿತ್ರವಾದಾಗ, ತಮ್ಮ ಕಾದಂಬರಿಯಲ್ಲಿ ಬಂದಷ್ಟು ಬಿಗು, ಚಲನ ಚಿತ್ರದಲ್ಲಿ ಬರಲಿಲ್ಲವೆಂದು ಚಿತ್ರ ನೋಡಿದ ಮೇಲೆ ಸಿಟ್ಟಾಗಿ, ಶ್ರೇಷ್ಠ ನಿರ್ದೇಶಕ ಶ್ರೀ ಪುಟ್ಟಣ್ಣ ಕಣಗಾಲ್‌ರವರನ್ನೇ ತರಾಟೆಗೆ ತೆಗೆದುಕೊಂಡು, ನೀವು ಚಿತ್ರಿಸಿರುವುದು ನಾಗರಹಾವಲ್ಲ, ಕೇರೆಹಾವು ಎಂದು ಗುಡುಗಿದರು ಇಂತಹ ವ್ಯಕ್ತಿ ತ. ರಾ. ಸು. ...

ಕನ್ನಡದ ಚಳುವಳಿಯಲ್ಲಿ ತ. ರಾ. ಸು. ಪಾತ್ರ ಹಿರಿಯದು. ಕನ್ನಡ ದೇಶದಲ್ಲಿ ಹುಟ್ಟಿ ಬೆಳೆದ ಜನರೇ ಕನ್ನಡ ಭಾಷೆಯನ್ನ ಎಲ್ಲ ಹಂತಗಳಲ್ಲು ಆಡಳಿತ ಭಾಷೆ ಮಾಡದೇ ಒಣರಾಜಕೀಯ ಪ್ರತಿಷ್ಠೆಯನ್ನು ಬೆಳೆಸುತ್ತಿರುವ ನಮ್ಮ ರಾಜಕೀಯ ಪಟುಗಳಿಗೆ ಹೇಳುವ ಮಾತು ಇದು. ನೀವು ಕನ್ನಡದ ಬಗ್ಗೆ ಇಷ್ಟೊಂದು ಉದಾಸೀನ ತಾಳುವುದಾದರೆ, ನೀವು ದಯವಿಟ್ಟು ಅಧಿಕಾರ ಬಿಟ್ಟು ಕೆಳಗೆ ಇಳಿಯಿರಿ. ಇದು, ತ.ರಾ.ಸು.ರವರ ಎಚ್ಚರಿಕೆಯ ಮಾತು.

ಚಿತ್ರದುರ್ಗ ಜಿಲ್ಲೆಯಲ್ಲಿ ಹುಟ್ಟಿ ಬೆಳೆದ ತ. ರಾ. ಸು.ರವರಿಗೆ, ಚಿತ್ರದುರ್ಗದಲ್ಲಿ ಹುಟ್ಟಿ ಬೆಳೆದ ರಾಜಕಾರಣಿ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಬಗ್ಗೆ ಅಪಾರ ಗೌರವ. ನಿಜಲಿಂಗಪ್ಪನವರು ಕೂಡ, ನಮ್ಮ ಹುಡುಗ ಸುಬ್ಬು ಎಂದೇ ವಾತ್ಸಲ್ಯದಿಂದ ಹೇಳುತ್ತಾರೆ. ಅ. ನ. ಕೃ. ತ.ರಾ.ಸು.ರವರ ಸಾಹಿತ್ಯದ ಗುರು ಅವರ ಬಗ್ಗೆ, ಅ. ನ. ಕೃ. ಎಂಬ ವಿಮರ್ಶಾತ್ಮಕ ಮುನ್ನೂರಕ್ಕೂ ಹೆಚ್ಚಿನ ಪುಟದ ಜೀವನ ಚರಿತ್ರೆಯನ್ನ ಈಗ ಇಪ್ಪತ್ತೈದು ವರ್ಷಗಳ ಹಿಂದೆಯೇ ಬರೆದು ಹೊಸ ಮಾದರಿಯನ್ನು ಹಾಕಿದ ಮಹಾಶಿಲ್ಪಿ.

ಅ. ನ. ಕೃ., ತ. ರಾ. ಸು., ಬೀಚಿ, ಟಿ. ಮಹಾಬಲೇಶ್ವರಭಟ್ಟ, ನಾಡಿಗೇರ ಕೃಷ್ಣರಾವ್, ಎಂ. ರಾಮಮೂರ್ತಿ ಇವರ ಒಂದು ತಂಡ, ಕನ್ನಡ ಸಾಹಿತ್ಯಕ್ಕೆ ಹಾಗೂ ಕನ್ನಡ ಮಾತನಾಡುವ ಎಲ್ಲ ಭಾಗಗಳು ಒಂದಾಗಿ ಅಖಂಡ ಕರ್ನಾಟಕವಾಗಬೇಕೆನ್ನುವ ಬಗ್ಗೆ [illegible]ರಿಂದ ಒಂದು ಹೋರಾಟವೇ ನಡೆಯಲು ಪ್ರೇರಕ ಶಕ್ತಿಯಾಯಿತು. ಈ ತಂಡ ನಾಡಿನಲ್ಲಿ ಒಂದು ಶಿಲಾಸ್ತಂಭವಾಯಿತು. ಒಮ್ಮೆ ಅ. ನ. ಕೃ.ರವರ ಅನಾರೋಗ್ಯ ಹೆಚ್ಚಾದಾಗ ಒಮ್ಮೆ ನಾವೆಲ್ಲರೂ ಸೇರಿ ಅವರ ಮನೆಯಲ್ಲಿ ಕಂಡೆವು. ಅ.ನ.ಕೃ. ಇದರಿಂದ ಚೇತರಿಸಿಕೊಳ್ಳುವ ಭರವಸೆ ನಮಗೆ ಕಾಣಲಿಲ್ಲ. ಆಗ, ತ. ರಾ. ಸು.ರವರ ಮನಸ್ಸು ತುಂಬಾ ವ್ಯಾಕುಲಗೊಂಡಿತು. ನಾವು ಅನಾಥರಾದೆವು ಎಂದರು, ಕಣ್ಣಿನಲ್ಲಿ ನೀರು ತುಂಬಿತು. ಇಂತಹ ದೊಡ್ಡ ಮನುಷ್ಯರು ನಮಗಿನ್ನು ಸಿಗುವುದಿಲ್ಲ ಎಂದರು. ಅಣ್ಣನಂತಿದ್ದ ಇವರನ್ನ ಕಳೆದು ಕೊಂಡು ನಾವು ಮುಂದೆ ಬದುಕುವುದು ಹೇಗೆ ಭಟ್ಟರೆ ಎಂದರು, ತ.ರಾ.ಸು.ಗೆ ಅ.ನ.ಕೃ. ಬಗ್ಗೆ ಇದ್ದ ಭಾಂದವ್ಯ ಇದು.

ಡಗಲೆ ಪಾಯಿಜಾಮು, ಬಿಳಿಯ ಜುಬ್ಬ, ಕೆದರಿದ ತಲೆಕೂದಲು, ನೆಟ್ಟಗೆ ನಿಂತ ಬೆನ್ನು, [illegible], ಸಿಗರೇಟು ಸೇದುತ್ತಾ, ಕಾಫಿ ಕುಡಿಯುತ್ತಾ, ಪುಸ್ತಕ ಓದುತ್ತಾ, ಇರುವುದು ತ. ರಾ. ಸು.ರವರ ಹುಟ್ಟುಗುಣ. ಶಿವಮೊಗ್ಗ ಜಿಲ್ಲೆಯೆಂದರೆ ಇವರಿಗೆ ಬಲು ಪ್ರೀತಿ. ತಳುಕಿನ ವೆಂಕಣ್ಣಯ್ಯನವರ ಮನೆತನದಲ್ಲಿ

ಹುಟ್ಟಿ, ಮೈಸೂರಿನ "ಗಿರಿಕನ್ನಿಕಾ"ದಲ್ಲಿ ವಾಸವಾಗಿ, ನಾಡಿನ ಸುತ್ತೆಲ್ಲಾ ಸಂಚರಿಸಿ, ಕೈಯಲ್ಲಿ ಪುಸ್ತಕವನ್ನು, ಬಾಯಲ್ಲಿ ಭಾಷಣವನ್ನು ಮಾಡುತ್ತಾ ಕನ್ನಡದ ತನವನ್ನು ಉಳಿಸಲು ಪ್ರಯಾಸ ಪಟ್ಟವರಲ್ಲಿ ತ.ರಾ.ಸು.ರವರು ಒಬ್ಬರು. ಇಷ್ಟೆಲ್ಲಾ ಆದರೂ ಇವರು ಸದಾ ನಿಗರ್ವಿಗಳು, ಖಂಡಿತ ವಾದಿಗಳು. ಮೈಸೂರಿನಲ್ಲಿ ನಡೆಯುವ ದಸರಾ ಉತ್ಸವದ ವೀಕ್ಷಕ ವರದಿಗೆ, ಮೈಸೂರು ಆಕಾಶವಾಣಿಯವರಿಗೆ ತ.ರಾ.ಸು. ಬೇಕೇ ಬೇಕು. ಮೈಸೂರಿಗೆ ಬರುವ ಜನರ ಪ್ರತಿಯೊಬ್ಬರ ಮುಖವೂ ಇವರಿಗೆ ಚಿರಪರಿಚಯ. ಅಂತೆಯೇ ಮೈಸೂರಿನ ಪ್ರತಿಯೊಂದು ರಸ್ತೆಯೂ ಅವರಿಗೆ ಗೊತ್ತು. ಆದ್ದರಿಂದ ಆಕಾಶವಾಣಿಯವರ ಕೆಲಸ ಬಹು ಸುಲಭ. ತ.ರಾ.ಸು. ರವರ ಆಕಾಶವಾಣಿ ವರದಿ ಕಿವಿಗೆ ಆಪ್ಯಾಯಮಾನ.



# ಶ್ರೀ ಕೋ. ಚನ್ನಬಸಪ್ಪ

ರಾಷ್ಟ್ರಕವಿ ಕುವೆಂಪುರವರ, 'ರಾಮಾಯಣ ದರ್ಶನಂ' ಮಹಾ ಮೇರುಕೃತಿಯನ್ನು ಕುರಿತು ವಿಮರ್ಶೆ ಮಾಡುವ ಕೆಲಸ ಅಷ್ಟೊಂದು ಸುಲಭ ಸಾಧ್ಯವಾದುದಲ್ಲ. ಅಂಥ ಸಾಹಸಕ್ಕೆ ಕೈ ಹಾಕಿ, ಬಹು ಯಶಸ್ವೀ ಗ್ರಂಥ ವಿಮರ್ಶೆಯನ್ನು ಮಾಡಿದವರು ಕೋ. ಚನ್ನಬಸಪ್ಪನವರು. ರಾಮಾಯಣ ದರ್ಶನಂ, ಮಹಾ ಮೇರು ಕೃತಿಯನ್ನು ಕುರಿತು, ಪ್ರಬುದ್ಧ ಕರ್ನಾಟಕದಲ್ಲಿ ಬರೆದ ಲೇಖನ ಬೆಳೆಯುತ್ತಾ ಬಂದು ಸಂಭಾವನ ಗ್ರಂಥ, "ಗಂಗೋತ್ರಿ"ಯಲ್ಲಿ ಇನ್ನೂರೈವತ್ತಕ್ಕೂ ಹೆಚ್ಚಿನ ಪುಟವನ್ನು ಆಕ್ರಮಿಸಿ ಗ್ರಂಥದ ಯೋಗ್ಯತೆಯು ಹೆಚ್ಚಲು ಕಾರಣವಾಯಿತು.

ಬಳ್ಳಾರಿ ಜಿಲ್ಲೆಯ ಕೂಡಲಿ ತಾಲ್ಲೂಕಿನ ಆಲೂರಿನಲ್ಲಿ ಜನ್ಮವೆತ್ತಿದ ಚನ್ನಬಸಪ್ಪನವರು, ಬಾಲ್ಯ, ವಿದ್ಯಾಭ್ಯಾಸವನ್ನು ತಮ್ಮ ಗ್ರಾಮದಲ್ಲಿಯೇ ಕಳೆದು, ವಿದ್ಯಾರ್ಥಿದೆಸೆಯಲ್ಲಿಯೇ ೧೯೪೨ರಲ್ಲಿ ಎದ್ದ ರಾಜಕೀಯ ಸ್ವಾತಂತ್ರ್ಯದ ಹೋರಾಟದಲ್ಲಿ ಪಾಲ್ಗೊಂಡು, ವಿದ್ಯಾರ್ಥಿಯಾಗಿಯೇ ಬಳ್ಳಾರಿ ಜನತೆಗೆ ವೀರ ಕರೆಯನ್ನಿತ್ತರು. ಹಲವಾರು ಸ್ಥಳಗಳಲ್ಲಿ ಸೇರಿದ ಸಭೆಯಲ್ಲಿ ಭಾಷಣ ಮಾಡಿ, ಜನರ ಮನಸವನ್ನು ಪರಿವರ್ತಿಸಿದರು. ಸ್ವಾತಂತ್ರ್ಯ ಸಂಗ್ರಾಮದ ನಾಯಕತ್ವವನ್ನು ವಹಿಸಿ ಸೆರೆಮನೆ ಸೇರಿದರು. ಬಿಡುಗಡೆಯಾದೊಡನೆ, ವಿದ್ಯಾಭ್ಯಾಸವನ್ನು ಮುಂದುವರೆಸಿ, ನ್ಯಾಯ ಶಾಸ್ತ್ರದ ಪಾರಂಗತರಾದರು. ಉನ್ನತ ವಿದ್ಯೆಯನ್ನು ಕಲಿತರು. ತಾವು ಬಂದ ದಾರಿಯಲ್ಲಿ ಹಲವಾರು ಸಲ ತಿರುಗಿ ನೋಡಿದ್ದಾರೆ. ತಾವು ಜನ್ಮವೆತ್ತಿದ ರೈತ ಕುಟುಂಬದ ಬಗ್ಗೆ ಇವರ ಆಸಕ್ತಿ ಏನೂ ಕಡಿಮೆಯಾಗಲಿಲ್ಲ. ರೈತರ ಸಂಘಟನೆ,

ಅವರ ನೋವು-ನಲಿವು, ಅವರ ಅಭಿವೃದ್ಧಿ ಕಾರ್ಯ ಇವರ ಸದಾಚಿಂತನೆ. ರೈತರ ಸಮಸ್ಯೆಗಳ ಬಗ್ಗೆ, "ರೈತ" ಎಂಬ ಹೆಸರಿನ ವಾರ ಪತ್ರಿಕೆಯ ಪ್ರಕಟಣೆ, ಅದರ ಸಂಪಾದಕ, ಲೇಖಕ. ನಿರ್ಭೀತ. ನಿರ್ದಾಕ್ಷಿಣ್ಯವಾಗಿ ರೈತ ಸಮಸ್ಯೆಯ ಪರಿಹಾರಕ್ಕೆ ಕರೆ. ಬಳ್ಳಾರಿ ಜನತೆಯ ಯುವಕ ನೇತ್ರಿನ ನಾಯಕ. ಜನರನ್ನು ಆಕರ್ಷಿಸುವ ಮಾಂತ್ರಿಕತನ ಸಂಗಡ ವಕೀಲಿವೃತ್ತಿ ನ್ಯಾಯಾಲಯದಲ್ಲಿ ರೈತರ ಪರ ಹೋರಾಟ, ಕರ್ನಾಟಕ ಏಕೀಕರಣಕ್ಕಾಗಿ ಕರೆ ವಯಸ್ಕರ ಶಿಕ್ಷಣ ಸಮಿತಿಯ ಜಿಲ್ಲೆಯ ಮುಖ್ಯ ಸೂತ್ರಧಾರ, ಬಳ್ಳಾರಿಯ ಪ್ರಸಾದ ಪುರುಷ ಇವೆಲ್ಲವೂ ಚನ್ನಬಸಪ್ಪನವರ ಮುಂದಾಳತ್ವದ ಹೆಜ್ಜೆಯ ದಾರಿ.

ವಕೀಲಿ ವೃತ್ತಿಯೊಡನೆ, ಸಾಹಿತ್ಯ ರಚನೆ. ಸಣ್ಣ ಕತೆಗಳ ಜನಕ "ನೊಗದ ನೇಣು", "ಹಿಂದಿರುಗಿ ಬರಲಿಲ್ಲ" ಕಾದಂಬರಿಯ ಸೃಷ್ಟಿ. ಸ್ವಾಮಿ ರಾಮಕೃಷ್ಣ ಪರಮಹಂಸ ಸಾಹಿತ್ಯದ ಅನುವಾದ. ರಾಷ್ಟ್ರಕವಿ "ಕುವೆಂಪು"ರವರೊಡನೆ ಸಂಪರ್ಕ. ಅವರ ಕೃತಿಗಳ ಅಭ್ಯಾಸ, ಕಾವ್ಯಸೃಷ್ಟಿ, ನಾಟಕದ ಬರಹಗಾರ. "ಸಜೀವ ಸಾಹಿತ್ಯಮಾಲೆ"ಯ ಮುಖಿ, ಸಂಪಾದಕತ್ವ. ಕರ್ನಾಟಕದ ಜನತೆಗೇ ಚನ್ನಬಸಪ್ಪ ಹೆಸರು ಕಿರೀಟಪ್ರಾಯ; ಮೇಲುಗೋಪುರ, "ಖಜಾನೆ" ಎಂಬ ಗ್ರಂಥಕ್ಕೆ ಭಾರತ ಸರ್ಕಾರದ ಬಹುಮಾನದ ಕವಾಯಿತು.

ಉತ್ತಮ ಭಾಷಣಕಾರ, ಭಾಷಣದಲ್ಲಿ ಸತ್ಯತೆ, ಸರಳತೆ, ನವೀನತೆ, ಮುಗ್ಧತೆ ವಿಚಾರ ಧಾರೆಯನ್ನು ಸಭೆಯ ಮಧ್ಯದಲ್ಲಿ ತಂದು ನಿಲ್ಲಿಸುವ ಮಹಾಶಕ್ತಿ. ಭಾಷಣದಲ್ಲಿ ಜನರನ್ನು ಹಿಡಿದಿಡುವ ಕುಶಾಗ್ರಬುದ್ಧಿ, ರಾಮಕೃಷ್ಣ. ಸ್ವಾಮಿ ವಿವೇಕಾನಂದ, ಪೈಗಂಬರ, ವಿದ್ಯೆ, ವಿಜ್ಞಾನ, ಎಲ್ಲ ವಿಚಾರಗಳಲ್ಲಿಯೂ ಗಂಟೆ-ಗಟ್ಟಲೆ ಮಾತನಾಡುವ ಪರಮಶಕ್ತಿ. ಪಂಪ, ಕುಮಾರವ್ಯಾಸ, ಹರಿಹರ, ರಾಘವಾಂಕ, ವಾಲ್ಮೀಕಿ, ಮುಂತಾದ ಕವಿಗಳ ಮೇಲೆ ಪ್ರಭುತ್ವದ ಭಾಷಣಮಾಡುವ ಧೀರತೆ– ಇದು ಚನ್ನಬಸಪ್ಪನವರಲ್ಲಿ ಕರತಲಾಮಲಕ.

ಚನ್ನಬಸಪ್ಪನವರಿಗೆ ವ್ಯಕ್ತಿ ಸ್ವಾತಂತ್ರ್ಯ ಹರಣ ಆದರೆ ಸಹಿಸಲಾರದಷ್ಟು ಕೋಪ, ಉಗ್ರನರಸಿಂಹರಾಗುತ್ತಾರೆ. ನಮ್ಮ ದೇಶದ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರು ದೇಶದ ಜನರ ಸ್ವಾತಂತ್ರ್ಯವನ್ನು ಕಿತ್ತುಕೊಂಡು ತುರ್ತು ಪರಿಸ್ಥಿತಿಯನ್ನು ರಾಷ್ಟ್ರದ ಜನತೆಯ ಮೇಲೆ ಹೇರಿದಾಗ, ನ್ಯಾಯಮೂರ್ತಿಸ್ಥಾನದಲ್ಲಿದ್ದ ಶ್ರೀ ಕೋ. ಚ. ಯವರಿಗೆ, ವ್ಯಥೆ ಸಿಟ್ಟು. ನಮ್ಮ ರಾಷ್ಟ್ರ ಯಾವ ದಿಕ್ಕಿಗೆ ಹೋಗುತ್ತಿದೆ ಎಂಬ ಕೊರಗು. ನ್ಯಾಯಮೂರ್ತಿ ಸ್ಥಾನದಿಂದ ನಿವೃತ್ತಿಯಾದ ನಂತರ ಆ ಬಗ್ಗೆ ಬರೆದರು. ನ್ಯಾಯ ಪರಿಪಾಲನೆಯಲ್ಲಿ ನ್ಯಾಯವಾದಿಗಳ

ಕರ್ತವ್ಯವೇನು ಎಂಬ ಬಗ್ಗೆ ನಾಡಿನ ಎಲ್ಲ ಪತ್ರಿಕೆಗಳಿಗೆ ಲೇಖನ. "ಸರ್ಕಾರ ಹಾಗೂ ನ್ಯಾಯಾಲಯ" ಈ ಬಗ್ಗೆ ಕೂಡ ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಮತ್ತೊಂದು ದಿಕ್ಕಿನ ಲೇಖನ, ಹೀಗೆ ಕೋ. ಚನ್ನಬಸಪ್ಪನವರು ಸಾಹಿತ್ಯ, ಸಮಾಜ ಸುಧಾರಣೆ, ನ್ಯಾಯ ಪರಿಪಾಲನೆ, ರಾಷ್ಟ್ರ ಸೇವೆ, ಮುಂತಾದ ಕಾರ್ಯಗಳಲ್ಲಿ ಹೇಳುವಂತಹ ಹೆಸರನ್ನ ಗಳಿಸಿದರು. ವಯಸ್ಸು ದಿನ ದಿನಕ್ಕೂ ಏರುತ್ತಿದ್ದರೂ ಕರ್ತವ್ಯ ಮಾತ್ರ ದಿನ ದಿನಕ್ಕೂ ಚುರುಕು ಗೊಳ್ಳುತ್ತಿದೆ ಎಂಬುದಕ್ಕೆ ಶ್ರೀ ಚನ್ನಬಸಪ್ಪನವರು ಒಂದು ಉತ್ತಮ ನಿದರ್ಶನ. ಶ್ರೀ ಜಯಪ್ರಕಾಶ ನಾರಾಯಣರ ಆಂದೋಲನದ ಬಗ್ಗೆ ಮೆಚ್ಚುಗೆ, ಮುಂದಿನ ಪೀಳಿಗೆ ರಾಷ್ಟ್ರ ಪ್ರೇಮವನ್ನು ಬೆಳಸಿ ಕೊಳ್ಳಬೇಕೆಂದು, ನಾಡಿನ ಬಗ್ಗೆ ದುಡಿಯಬೇಕೆಂದು ಯುವಜನರಲ್ಲಿ ಕಳಕಳಿಯ ಮನವಿ.

ಸರ್ಕಾರದ ಉನ್ನತ ಸಮಿತಿಗಳಲ್ಲಿ ಸದಸ್ಯತನ. ಕಳೆದ ಹತ್ತು ವರ್ಷಗಳ ಹಿಂದೆ ರಾಜ್ಯದ ಶ್ರೇಷ್ಠ ನ್ಯಾಯಾಧೀಶರಿಂದ ಜಿಲ್ಲೆಯ ಮುಖ್ಯ ನ್ಯಾಯಾಧೀಶರನ್ನಾಗಿ ಕೋ. ಚನ್ನಬಸಪ್ಪನವರ ನೇಮಕ. ಮೊದಲು ಶಿವಮೊಗ್ಗಾ, ಬೆಳಗಾಂ, ಜಿಲ್ಲೆಯನ್ಯಾಯಸ್ಥಾನದ ತೀರ್ಪುಗಾರ. ಶಿವಮೊಗ್ಗಾ ಜಿಲ್ಲೆಯಲ್ಲಿ ಜನಪ್ರಿಯತೆ. ಸಾಹಿತಿಗಳ ಸಹೃದಯಿಗಳ ಬಾಂಧವ್ಯ, ಪ್ರೋತ್ಸಾಹ, ಚೇತನ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಚನ್ನಬಸಪ್ಪನವರ ಸೇವೆ ಅಪಾರ ಅಪರಿಮಿತ. ಈಗ ಸುಪ್ರೀಂ ಕೋರ್ಟಿನ 'ನ್ಯಾಯವಾದಿ, ಹಾಗೂ ಸಕ್ರಿಯ ಬರಹಗಾರ.

ಈಗ ಕಳೆದ ಎಂಟು ವರ್ಷದ ಹಿಂದೆ ಕೋ. ಚನ್ನಬಸಪ್ಪನವರು ರಾಜ್ಯದ ವರಮಾನ ತೆರಿಗೆ ಟ್ರಿಬ್ಯುನಲ್ ಅಧ್ಯಕ್ಷರಾಗಿ ಕೆಲಸ ಮಾಡಿದರು. ಯಾವ ಕೆಲಸವನ್ನೇ ವಹಿಸಿದರೂ ಆ ಕೆಲಸವ, ಕಟ್ಟುನಿಟ್ಟಿನ ಕಟ್ಟಾಳಾಗಿ, ಸೇವೆ ಸಲ್ಲಿಸುವ ಗುಣ ಚನ್ನಬಸಪ್ಪನವರದು. ಆ ಸ್ಥಾನದ ಕೀರ್ತಿ ಬೆಳಗುವುದು, ಚನ್ನಬಸಪ್ಪನವರಿಂದ ಹುದ್ದೆಯ ಕೀರ್ತಿ ಬೆಳಗುತ್ತದೆ. ಅವರೊಡನೆ ಮಾತಿಗೆ ಕುಳಿತರೆ, ವಾಲ್ಮೀಕಿಯಿಂದ ಕುವೆಂಪು ತನಕ; ಬುದ್ಧನಿಂದ ಪೈಗಂಬರನ ತನಕ; ಗಾಂಧಿಯಿಂದ ಕೆನಡಿಯ ತನಕ ಮಾತಿನ ವಿಚಾರಧಾರೆ ಹರಿಯುತ್ತದೆ. ಬೇಂದ್ರೆ, ಪುಟ್ಟಪ್ಪ, ಶಾಸ್ತ್ರಿ, ಡಿ.ವಿ.ಜಿ., ವೆಂಕಣ್ಣಯ್ಯ, ರಂಗಣ್ಣ, ತೀ. ನಂ. ಶ್ರೀ., ಬಿ. ಎಂ. ಶ್ರೀ. ಇವರೆಲ್ಲರ ಬಗ್ಗೆ ಅತಿ ಹೆಚ್ಚಿನ ಗೌರವ; ರಾಜ್ಯದ ಇಂದಿನ ಪರಿಸ್ಥಿತಿಯ ಬಗ್ಗೆ ಚಿಂತೆ. ಜಾತೀಯ ರೋಗಕ್ಕೆ ಚಿಕಿತ್ಸೆ, ಸೂಚಕ. ರಾಷ್ಟ್ರೀಯ ಬೆಳವಣಿಗೆ ಬಗ್ಗೆ ವಿಶೇಷ ಕಾಳಜಿ. ಅಪಾರ್ಥ ಚಿಂತನೆ. ಇವೆಲ್ಲವೂ ಚನ್ನಬಸಪ್ಪನವರ, ನಿತ್ಯ ಜೀವನದ ಒಂದು ಅಂಶ. ಚನ್ನಬಸಪ್ಪನವರಂತಹ ಮಾರ್ಗದರ್ಶಕರು ಚಿರಕಾಲ ಬಾಳಬೇಕು. ಅವರ ಮಾರ್ಗಕ್ಕೆ [illegible] ಕಾಣಬೇಕು.



## ಶ್ರೀ ನಾಡಿಗೇರ ಕೃಷ್ಣರಾವ್

ಯಾರಾದರೂ ಏನಾದರೂ ಹೇಳಿದರೆ ಸಾಕು ಅದಕ್ಕೊಂದು ಹಾಸ್ಯದ ಲೇಪನ ಕೊಟ್ಟು ಆ ಮಾತಿಗೆ ನಗುಬರುವಂತೆ ಮಾಡುವುದು ಹೆಸರಾಂತ ಸಾಹಿತಿ, ಹಾಸ್ಯ ಲೇಖಕ ಶ್ರೀ ನಾಡಿಗೇರ್ ಕೃಷ್ಣರಾಯರ ಹುಟ್ಟು ಕಸುಬು. ಅವರನ್ನ ನೋಡಿದರೆ ಈ ಬಡ ವ್ಯಕ್ತಿ ಲೇಖಕ ಹೌದೆ ಎಂದು ಯಾರಾದರೂ ಪ್ರಶ್ನಿಸುತ್ತಾರೆ. ಬಡ ಕಲಾದ ದೇಹ, ಭಾರವಾದ ತಲೆ. ತಲೆಯ ಒಳಗಡೆ ಹಾಸ್ಯದ ಯೋಚನೆಯ ಸೂಕು ಸುಗ್ಗಲು ದಪ್ಪಗಿರುವ ಜನರು ವಿನೋದಕ್ಕೆ ಒಂದು ವಸ್ತು ಎನ್ನುತ್ತಾರೆ. ಹಾಗೆಯೇ ತೆಳುವಾದ ಬಡಕಲು ಜನರೂ ಕೂಡ ಹಾಸ್ಯಕ್ಕೆ, ವಿನೋದಕ್ಕೆ ಒಂದು ವಸ್ತುವಾಗುತ್ತಾರೆ ಇದಕ್ಕೆ ನಾಡಿಗೇರ್ ಕೃಷ್ಣರಾವ್ ಒಂದು ಜೀವಂತ ಸಾಕ್ಷಿ

ಶ್ರೀ ನಾಡಿಗೇರ್ ಕೃಷ್ಣರಾಯರು ಯಾವಾಗಲು ತಮಾಷೆ ಮನುಷ್ಯ ಅವರು ಹಾಸ್ಯಕ್ಕಾಗಿ ಇನ್ನೊಬ್ಬರನ್ನ ಉಪಯೋಗಿಸಿ ಅವರನ್ನ ಕುರಿತು ವಿನೋದ ಮಾಡುವುದಿಲ್ಲ. ತಮ್ಮನ್ನ, ತಮ್ಮ ಹೆಂಡತಿಯನ್ನ, ತಮ್ಮ ಮಕ್ಕಳನ್ನ ಅವರು ಯಾವಾಗಲೂ ವಸ್ತುವಾಗಿಟ್ಟು ಕೊಂಡು ಕೀಟಲೆ ಮಾಡುತ್ತಾರೆ, ಜನರನ್ನ ನಗಿಸುತ್ತಾರೆ, ಕಿತಾಪತಿ ನಡೆಸುತ್ತಾರೆ. ಅವರಲ್ಲಿರುವ ಸರಳತೆ ಎದ್ದು ಕಾಣುವ ಗುಣಧರ್ಮ

ವಾದರೆ, ಮಾತಿನಿಂದ ಜನರನ್ನು ಆಕರ್ಷಿಸುವ ಒಂದು ಮೋಡಿಯೂ ಅವರಲ್ಲಿ ಭದ್ರವಾಗಿ ನೆಲೆಯೂರಿದೆ.

ನಾಡಿಗೇರ್‌ರವರು ಮೊದಲು ವಾರಪತ್ರಿಕೆಗೂ, ಮಾಸಪತ್ರಿಕೆಗೂ ಬರೆಯುತ್ತಾ ಬಂದವರು. ಹರಟೆ ಹೊಡೆಯುವುದರಲ್ಲಿ ನಿಸ್ಸೀಮ ಪುರುಷರಾದ ಇವರು ಹರಟೆಗಳ ಸಂಗ್ರಹವನ್ನೇ ಮೊದಲು ಬರೆದದ್ದು, "ಹರುಕು ಮುರುಕು"ವಿನಿಂದ ಪ್ರಾರಂಭವಾದ ಇವರ ಬರಹಗಳು, ನಾಡಿಗೇರರ ನಗೆ ಬರಹಗಳು ಎಂಬ ಹೆಸರಿನಿಂದ ಹಲವು ಹರಟೆಗಳ ಸಂಗ್ರಹ ಪ್ರಕಟವಾಯಿತು. ಇವರ "ಎದಿರೇಟು" ಕಾದಂಬರಿಗೆ ಸಿಕ್ಕಿದಷ್ಟು ಪ್ರಚಾರ, ವಿಮರ್ಶಕರಿಂದ ಸಿಕ್ಕಿದ ಭಾರೀ ಸ್ವಾಗತ, ನಾಡಿಗೇರರನ್ನು ಎತ್ತರಕ್ಕೆ ಏರಿಸಿತು. ಅನಂತರದಲ್ಲಿ ಬಂದ ಕಾದಂಬರಿಗಳು ಲೆಕ್ಕವಿಲ್ಲದಷ್ಟು.

ಒಮ್ಮೆ ನಾಡಿಗೇರರು ಸಿಕ್ಕಾಗ ಏನು ನಿಮ್ಮ ಹರಟೆ ಇತ್ತೀಚೆಗೆ ಬರುತ್ತಿಲ್ಲವಲ್ಲ ಎಂದೆ. ಅದಕ್ಕೆ ನನಗೆ ಹೇಳಿದರು ನಿಮಗೆ ತಲೆ ಸರಿಯಾಗಿದೆಯೆ? ಇದು ಕಾದಂಬರಿ ಯುಗ. ಈಗ ಹರಟೆ ಬರೆದರೆ ಬರೆದವನು, ಪ್ರಕಾಶಕನು, ದಿವಾಳಿಯಾದಾನು. ಲಂಟಾನಾ ಬೆಳೆದಂತೆ ನಮ್ಮ ಬ್ಯಾಂಕ ಸಾಲವೂ ಬೆಳೆದೀತು ಎಂದು. ನಾನು ಕೇಳಿದ ಒಂದು ಪ್ರಶ್ನೆಗೆ ಇನ್ನೊಂದು ವಿನೋದ ಕೊಡುವಾಗ ಅವರೊಡನೆ ದಿನವೆಲ್ಲಾ ಇದ್ದರೆ ನಮ್ಮ ಗತಿ ಏನಾದೀತು ಎಂದು ನೀವೇ ಊಹಿಸಬಹುದು. ಇನ್ನೊಂದು ಪ್ರಸಂಗದಲ್ಲಿ ನಾನು, ನಾಡಿಗೇರ್, ಬೀಚಿ ಮೂರೂ ಜನರು ಸೇರಿದ್ದಾಗ ಏನು ನಾಡಿಗೇರರೇ, ಬೀಚಿಗೂ, ನಿಮಗೂ ಆಗುವುದಿಲ್ಲ ಎಂದು ಭಾರೀ ಪ್ರಚಾರ ಎದ್ದಿದೆಯಲ್ಲ ಎಂದೆ.

ಹೌದು!

ಯಾತಕ್ಕಾಗಿ?

ನನಗೂ, ಬೀಚಿಗೂ ಒಂದು ಚಿಕ್ಕ ಆಸ್ತಿಗಾಗಿ ಮನಸ್ತಾಪ ಬೆಳೆದಿದೆ ಎಂದರು.

ಯಾವ ಆಸ್ತಿ!

ರುದ್ರಭೂಮಿಯಲ್ಲಿರುವ ಮೂರಡಿ ಆರಡಿ ಜಾಗಕ್ಕಾಗಿ. ನನಗೆ ಆ ಜಾಗ ಹೊಂದಲು ಬೇಕು ಅನ್ನುತ್ತೇನೆ ಬೀಚಿ ಆ ಜಾಗ ತನಗೆ ಹೊಂದಲು ಬೇಕು ಎನ್ನುತ್ತಾರೆ ಇದಕ್ಕೆ ಯಾವ ನ್ಯಾಯಾಲಯವು, ಯಾರ ಪರವಾಗಿ ತೀರ್ಪು ಕೊಡುತ್ತದೆಯೋ ನೋಡಬೇಕು ಎಂದರು. ಹೀಗೆ ಒಂದೊಂದು ಮಾತಿಗೂ ನಗುವನ್ನ

ಬೆರೆಸುವ ವಿಧಾನ ನಾಡಿಗೇರರಲ್ಲಿ ಜಲದ ನೀರು ಹರಿದಂತೆ ಹರಿಯುತ್ತಲೇ ಇರುತ್ತದೆ. ಅವರೊಡನೆ ದಿನ ಕಳೆಯುವುದೆಂದರೆ, ನಿಮಿಷ ಕಳೆದಂತಾಗುತ್ತದೆ. ಇನ್ನೊಂದು ವಿಚಾರ ಹೇಳುತ್ತೇನೆ. ಇನ್ನೊಮ್ಮೆ ನಾಡಿಗೇರರು ಬೆಂಗಳೂರಿನ ಆನಂದ ರಾವ್ ಸರ್ಕಲ್ ಹತ್ತಿರ ಸಿಕಿದರು. ಆ ಮಾತು, ಈ ಮಾತು ಪ್ರಾರಂಭವಾಗಿ, ಏನ್ರಿ ಈ ವರ್ಷವಾದರೂ ಮಗಳ ಮದುವೆ ಮಾಡಿ ಊಟ ಹಾಕುತ್ತೀರ ಅಂದೆ. ಭಟ್ಟರೇ, ನಾನು ಕಳೆದ ನಾಲ್ಕು ವರ್ಷದಿಂದ ವರ ವರ ಅಂತ ವರಲುತ್ತಾ ಇದ್ದೇನೆ ಇನ್ನು ವರ ಸಿಕ್ಕಿಲ್ಲ ನನ್ನಂತಹ ಕನ್ಯಾಪಿತೃಗಳ ಗೋಳು ನಿಮಗೆ ಈಗ ಹೇಗೆ ಗೊತ್ತಾಗಬೇಕು ಎಂದರು ನಾನು ನಿಂತಿರುವುದು ಚೌಕದಲ್ಲಿ ನಗು ತಡೆಯಲಾರದೆ ಹೋಯಿತು. ಹೀಗೆ, ನಾಡಿಗೇರರಲ್ಲಿ ತಕ್ಷಣ ಹೊಳೆಯುವ ವಿನೋದ ನೋಡಿ ನಾನು ಬಹಳ ಸಲ ಆಶ್ಚರ್ಯಪಟ್ಟಿದ್ದೇನೆ.

ಶ್ರೀ ನಾಡಿಗೇರರ ಐವತ್ತಕ್ಕೂ ಹೆಚ್ಚಿನ ಕಾದಂಬರಿಯನ್ನು ಬರೆದು ಎಲ್ಲ ಕಾದಂಬರಿಗಳಲ್ಲೂ ಹಾಸ್ಯವನ್ನು ಪುಟ ಪುಟಕ್ಕೂ ತುಂಬಿದರು. ಮೂವರು ಗೆಳತಿಯರು ಎನ್ನುವ ಕಾದಂಬರಿಯಂತೂ ನಿಸೂತನ ಮಾದರಿಯದು. "ನೈಲಾನ್ ಹುಡುಗಿ" ಎಂಬ ಹರಟೆಗಳ ಸಂಗ್ರಹ ಉತ್ತಮ ಸಂಗ್ರಹವಾಗಿದೆ. ಅದರಲ್ಲಿರುವ ಒಂದೊಂದು ಬರಹವೂ ಓದಿದಾಗಲೆಲ್ಲಾ ಹೊಟ್ಟೆ ಹುಣ್ಣಾಗುತ್ತದೆ.

ನಾಡಿಗೇರರು "ಪ್ರಜಾಮತ" "ಜನಪ್ರಗತಿ" ಮಲ್ಲಿಗೆ, ಪತ್ರಿಕೆಗಳಲ್ಲಿ ಉಪಸಂಪಾದಕರಾಗಿ ಬಹಳ ವರ್ಷ ಕೆಲಸ ಮಾಡಿದ್ದಾರೆ. ಸಾಹಿತ್ಯ ಹಾಗೂ ಪತ್ರಿಕೋದ್ಯಮ ಇವರ ಜೀವನದಲ್ಲಿ ದೀರ್ಘಕಾಲದಿಂದ ಬೆಳೆದುಬಂದ ಹವ್ಯಾಸ.

ಈಗ ನಾಡಿಗೇರರಿಗೆ ಎಪ್ಪತ್ತು ವರ್ಷ ಅವರ ಅರವತ್ತನೇ ಹುಟ್ಟು ಹಬ್ಬ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ, ನಟನ ಕಲಾ ಸಂಘದವರು ಅತ್ಯಂತ ಅದ್ದೂರಿಯಿಂದ ಶ್ರೀ ಕೆ. ಹನುಮಂತಯ್ಯನವರ ಅಧ್ಯಕ್ಷತೆಯಲ್ಲಿ ಸನ್ಮಾನ ಮಾಡಿದರು. ಅಂದು ಹಿರಿಯ ಸಾಹಿತಿ, ಶ್ರೀ ಅ. ನ. ಕೃಷ್ಣರಾಯರು ನಾಡಿಗೇರರ "ನೈಲಾನ್ ಹುಡುಗಿ" ಬಿಡುಗಡೆ ಮಾಡಿದರು. ಆ ಸಮಾರಂಭ ಅತ್ಯಂತ ಸ್ಮರಣೀಯ ಸಮಾರಂಭವಾಗಿತ್ತು. ನಾಡಿಗೇರರ ಗುಳಿಗೆಗಳು, ಹಾಸ್ಯ ರಾಸಾಯನ ಪುಸ್ತಕ ಬರೆದ ನಾಡಿಗೇರ ಸಾಹಿತ್ಯ ಚಿರನೂತನ. ಜೀವನದಲ್ಲಿ ನಾನಾ ಮುಖದ ಕಷ್ಟ ನಷ್ಟಗಳನ್ನು ಅನುಭವಿಸಿ, ಸಂಸಾರ ತಾಪತ್ರಯದಲ್ಲಿ ಈಸಿ ಜಯಿಸಿ, ಈಗ ಇಳಿ ವಯಸ್ಸಿನಲ್ಲಿ ನೆಮ್ಮದಿಯ ಜೀವನವನ್ನು ಅನುಭವಿಸುತ್ತಿದ್ದಾರೆ.

ಕನ್ನಡ ಸಾಹಿತ್ಯ, ಕನ್ನಡ ರಾಜ್ಯ, ಕನ್ನಡ ಜನ ಎಂದರೆ, ಸದಾ ಪ್ರೀತಿಸುವ ಇವರಲ್ಲಿ ಮನಸ್ಸು ವಿಶಾಲ, ಪರಿಪಕ್ವ ಜೀವನ, ಹದವರಿತ ಮಾತು. ಸಾಹಿತ್ಯದಿಂದಲೇ ಬದುಕಬೇಕೆಂಬ ಛಲದ ವ್ರತ. ಅ. ನ. ಕೃ.ರವರಿಗೆ ನಿಷ್ಠೆ. ಕನ್ನಡ ಚಳುವಳಿಯ ನಾಯಕ, ತರುಣ ಬರಹಗಾರರ ಮುಖಂಡ, ಶ್ರಮಜೀವಿ, ಪತ್ರಿಕೋದ್ಯಮಿ, ಪುಸ್ತಕ ಪ್ರಿಯ, ಇದು ನಾಡಿಗೇರರ ಜೀವನದ ಹಲವು ಮುಖ.

ಅವರದು ಸಾದಾ ಉಡುಪು ಕೆದರಿದ ಕ್ರಾಪು; ಆಳದಲ್ಲಿ ಹುಡುಕಬೇಕಾದ ಕಣ್ಣು, ಪಂಚೆ, ಬಿಳಿಯ ಶರಟು ಹೆಗಲ ಮೇಲೊಂದು ಧೋತರ. ಇವರ ಹಸ್ತಾಕ್ಷರ ಮಾತ್ರ ಬಲು ದುಂಡು, ಪತ್ರದ ಶೈಲಿ ಅತ್ಯಂತ ಮೋಹಕ ಆದರೆ ಬಹಳಷ್ಟು ಜನ ಛಾಯಾಗ್ರಾಹಕರು ಇವರ ಭಾವಚಿತ್ರ ತೆಗೆಯಲು ಸಾಧ್ಯವಾಗದೆ ಎಷ್ಟು ತೆಗೆದರೂ, ಹೇಗೆ ತೆಗೆದರೂ ಅದು ಕೊನೆಗೂ ವ್ಯಂಗ್ಯಚಿತ್ರ ಆಗಿದ್ದೇ ಬಹಳ. ಒಟ್ಟಿನಲ್ಲಿ ನಾಡಿಗೇರರ ಬಾಳು ಸಾರ್ಥಕವಾದ ಬಾಳು, ಎಂದು ಹೆಮ್ಮೆಯಿಂದ ಹೇಳಬೇಕು.

# ಶ್ರೀ ಮಾಸ್ಟರ್ ಹಿರಣ್ಣಯ್ಯ

ಹಿರಣ್ಣಯ್ಯ ಮಿತ್ರ ಮಂಡಳಿಯ ನಾಟಕ ನೋಡುವುದೆಂದರೆ, ಕನ್ನಡ ಜನತೆಗೊಂದು ಬಹು ದೊಡ್ಡ ಹಬ್ಬ. ದಿವಂಗತ ಕೆ. ಹಿರಣ್ಣಯ್ಯನವರಂತೆ, ಹಾಸ್ಯಪಾತ್ರ ವಹಿಸುವವರು, ಮುಂದೆ ಈ ನಾಡಿನಲ್ಲಿ ಹುಟ್ಟುವರೇ ಎಂಬ ಪ್ರಶ್ನೆ. ಆದರೆ ಅವರ ಮಗನೇ ತಂದೆಯನ್ನು ಮೀರಿಸುವಂತಹ ನಟನಾಗಬಹುದೆಂದು ಅಂದು ನಿರೀಕ್ಷಿಸುವುದೂ ಸಾಧ್ಯವಾಗದ ಮಾತು. ಇಂದು ನಾಡಿನ ಉದ್ದಗಲಕ್ಕೂ ಮಾಸ್ಟರ್ ಹಿರಣ್ಣಯ್ಯನವರ ಬಗ್ಗೆ ಮಾತು, ತಂದೆಯಂತೆ ಮಗನಿಗೂ ಬಿರುದು ಬಾವಲಿ, ಕೀರ್ತಿಯ ಕಳಶ.

ಮಾಸ್ಟರ್ ಹಿರಣ್ಣಯ್ಯನವರ ತಂದೆ, ಕೆ. ಹಿರಣ್ಣಯ್ಯನವರಿಂದ ಕನ್ನಡ ರಂಗಭೂಮಿಯ ಮೊದಲ ಕ್ರಾಂತಿ, ಸಮಾಜವನ್ನು ಬಡಿದೆಬ್ಬಿಸುವ, ಕ್ರಾಂತಿಕಾರೀ ನಾಟಕ "ದೇವದಾಸಿ"ಯ ಪ್ರದರ್ಶನ, "ದೇವಿ ಮಂಡೋದರಿ," "ಮಕಮಲ್ ಟೋಪಿ" ನಾಟಕದ ಅಭಿನಯ, ಸಂಗತ ಹತ್ತಾರು ನಾಟಕಗಳ ಪ್ರದರ್ಶನ, ಕಷ್ಟ ಪರಂಪರೆಯ ದಿನ ನಿತ್ಯದ ಕಷಾಯ, ಬಳ್ಳಾರಿ ಸಹೋದರಿಯರಾದ ಲಲಿತ, ರತ್ನಮಾಲ, ಯಶೋಧ ಮುಂತಾದವರೊಡನೆ ಕನ್ನಡ ನಾಡಿನಲ್ಲಿ ಓಡಾಟ, ಹಣಕ್ಕಾಗಿ ಪರದಾಟ, ಕನ್ನಡ ನಾಟಕ ರಂಗದ ಉದ್ಧಾರಕ್ಕಾಗಿ ಯೋಜನೆ, ಹೊಸ ಪ್ರಯೋಗ, ಜೀವನವನ್ನೇ ರಂಗಭೂಮಿಗಾಗಿ ಅರ್ಪಣೆ, ಕೊನೆಗೆ ರಂಗಭೂಮಿಯ ಮೇಲೆ ಆತ್ಮಾರ್ಪಣೆ.

ಮಾಸ್ಟರ್ ಹಿರಣ್ಣಯ್ಯನವರು ತಂದೆಯಷ್ಟೇ ಉತ್ತಮ ಹಾಸ್ಯಕಾರರು. ಅಭಿನಯ ಪಟು. ಇವರ ಹುಟ್ಟು ಹೆಸರು ನರಸಿಂಹಮೂರ್ತಿ. ಚಿಕ್ಕಂದಿನಲ್ಲಿ ತಾಯಿಯನ್ನು ಕಳೆದುಕೊಂಡು ಮಧ್ಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡ

ತಬ್ಬಲಿ. ವಿದ್ಯಾಭ್ಯಾಸಕ್ಕಾಗಿ ಸತತ ಪ್ರಯತ್ನ. ಮೈಸೂರಿನಲ್ಲಿ ವಿದ್ಯಾಭ್ಯಾಸ, ಪರೀಕ್ಷೆಯಲ್ಲಿ ಪದೇ ಪದೇ ಸೋಲು.

ಬಂಧುಗಳಿಂದ ದೂರ. ತುಮಕೂರು, ಚಿತ್ರದುರ್ಗ, ಬೆಂಗಳೂರು ಮುಂತಾದ ಕಡೆ, ತಂದೆಯ ಹೆಸರನ್ನು ಉಳಿಸಲು, ಪುನಃ ನಾಟಕ ಸಂಸ್ಥೆ ಕಟ್ಟಲು ಸತತ ಪ್ರಯತ್ನ. ಬಳ್ಳಾರಿ ವೆಂಕಪ್ಪನವರ ಆಸರೆ, ಎಂ. ಮುನಿವೆಂಕಟಪ್ಪ, ಬಳ್ಳಾರಿ ಲಲಿತ ಇವರೆಲ್ಲರ ಸಹಕಾರದಿಂದ ಪುನಃ ಹಿರಣ್ಯಯ್ಯ ಮಿತ್ರ ಮಂಡಳಿ ಉದಯ. ಒಂದೂವರೆ ವರ್ಷದಲ್ಲಿ ವೆಂಕಪ್ಪನವರ ಆಶ್ರಯದಿಂದ ದೂರ. ಆರ್ಥಿಕ ಮುಗ್ಗಟ್ಟಿನ ಆಘಾತದಿಂದ ನರಳಾಟ, ಮತ್ತೆ ಸಂಸ್ಥೆಯನ್ನು ಕಟ್ಟಬೇಕೆಂಬ ಚಪಲ ಮುನಿವೆಂಕಟಪ್ಪನವರ ಗೆಳೆತನದಿಂದ ಹಿರಣ್ಯಯ್ಯ ಮಿತ್ರ ಮಂಡಳಿಯ ಪುನಃ ಉದಯ. ಬೆಂಗಳೂರು, ತುಮಕೂರು, ಮೈಸೂರು, ಸಾಗರ, ಶಿವಮೊಗ್ಗ, ಹುಬ್ಬಳ್ಳಿಯಲ್ಲಿ ದೇವದಾಸಿ, ಲಂಚಾವತಾರ, ಭ್ರಷ್ಟಾಚಾರ, ನಾಟಕಗಳ ಪ್ರದರ್ಶನ. ಒಂದೊಂದು ನಾಟಕವೂ ಎಡೆ ಬಿಡದೆ ಒಂದೇ ಊರಿನಲ್ಲಿ ಮುನ್ನೂರಕ್ಕೂ ಮೇಲ್ಪಟ್ಟು ಪ್ರದರ್ಶನ.

ಮಾಸ್ಟರ್ ಹಿರಣ್ಯಯ್ಯನವರ, ಮಾತಿನ ಚಟಾಕಿ, ಸಮಾಜದ ಘಾತಕರ ಮುಖಕ್ಕೆ ಭೂತಗನ್ನಡಿಯ ಪ್ರದರ್ಶನ, ಲಂಚಕೋರ ಅಧಿಕಾರಿಗಳನ್ನು, ಬ್ಲಾಕ್ ಮಾರ್ಕೆಟ್ ವರ್ತಕರನ್ನು, ಸಮಾಜದ ದುಷ್ಟ ಪುಢಾರಿಗಳನ್ನು, ಹೆಂಡ ಕುಡಕರನ್ನು, ಮನೆ ಹಾಳುತನದವರನ್ನು, ಒಬ್ಬರಲ್ಲ ಹತ್ತಾರುಮಂದಿ ಸಮಾಜ ಕಂಟಕರನ್ನು ಪ್ರತಿ ದಿನವೂ ರಂಗಭೂಮಿಯ ಮೇಲೆ ತಂದು, ಎಳೆದು, ತಿಕ್ಕಿ, ರಿಪೇರಿ ಮಾಡುವ ಸತತ ಪ್ರಯತ್ನದಲ್ಲಿ ಶ್ರೀಯುತರ ಮಾತನ್ನು ಕೇಳಬೇಕು. ಆ ಮಾತಿನ ಪ್ರತಿ ಪದವನ್ನು ಹೆಕ್ಕಬೇಕು; ಆನಂದಿಸಬೇಕು.

"ದೇವದಾಸಿ" ನಾಟಕದಲ್ಲಿ ನಾಜೂಕಯ್ಯ, "ಮಕಮಲ್ ಟೋಪಿ" ನಾಟಕದಲ್ಲಿ ನಾಣಿ, "ಪಂಗನಾಮ"ದಲ್ಲಿ ಪ್ರಾಣೇಶ ಆಚಾರ, "ಲಂಚಾವಾತಾರ"ದಲ್ಲಿ ದತ್ತು "ಭ್ರಷ್ಟಾಚಾರ"ದಲ್ಲಿ ಮುರಾರಿ ಪಾತ್ರಗಳು ಕನ್ನಡ ರಂಗಭೂಮಿಯಲ್ಲಿ ನಿತ್ಯ ನೂತನ. ಈಗ ಹೊಸದಾಗಿ ಪ್ರಯೋಗಿಸುತ್ತಿರುವ ನಾಟಕ, "ಅತ್ಯಾಚಾರ" ಸಮಾಜದಲ್ಲಿ ಮಠಾಧಿಪತಿಗಳ ಸೋಗಿನಲ್ಲಿ, ಮಾಡಬಾರದ್ದನ್ನು ಮಾಡುತ್ತಿರುವ, ಕೆಲವು ಮಠಾಧೀಶರ ಅನ್ಯಾಯ ಅಕ್ರಮಗಳನ್ನ ಬಯಲಿಗೆಳೆದು ಸಮಾಜದಲ್ಲಿರುವ ಮೂಢಾತ್ಮರನ್ನು ಬಡಿದೆಬ್ಬಿಸುವ ಸಾಹಸ, ಅದರಲ್ಲಿ ಹಿರಣ್ಯಯ್ಯನವರ ದೇವೇಂದ್ರ ಪಾತ್ರ, ಅತ್ಯಂತ ಮಾರ್ಮಿಕವಾದದ್ದು. ಚಿಕ್ಕಂದಿನಿಂದಲೂ ಕಷ್ಟದ ಪರಂಪರೆಯನ್ನು ಅನುಭವಿಸಿ, ಸಮಾಜ ಘಾತುಕರ ಕಿರುಕುಳವನ್ನು ಸಹಿಸಿ, ಆದರೂ

ಚೇತರಿಸಿಕೊಂಡು, ಕನ್ನಡ ರಂಗಭೂಮಿಯ ಸೇವೆಯನ್ನು ಮಾಡುತ್ತಾ ಬಂದವರು, ಹಿರಣ್ಣಯ್ಯನವರು.

ರಾಜಮಹಾರಾಜರು ವಾಸವಾಗಿರುವ ಮೈಸೂರು ನಗರದಲ್ಲಿ, ಹುಟ್ಟಿ ಬೆಳೆದಿದ್ದರೂ, ಅಲ್ಲಿಯೇ ಕೆಲವು ವರ್ಷ ವಾಸವಾಗಿದ್ದರೂ, ಅನ್ನಕ್ಕಾಗಿ ಪರದಾಡುವುದು ಮಾತ್ರ ತಪ್ಪಲಿಲ್ಲ. ಇಂದು ಆ ಕಷ್ಟದಿಂದ ದೂರವಾಗಿದ್ದಾರೆ. ಹೆಂಡತಿ, ಮಕ್ಕಳನ್ನು ಪಡೆಯುವುದರ ಜೊತೆಗೆ, ಬೆಂಗಳೂರಿನಲ್ಲಿ ಮನೆಯನ್ನು ಕೊಂಡು ವಾಸವಾಗಿದ್ದಾರೆ. ಈ ಸುಖ ಜೀವನಕ್ಕೆ ಕನ್ನಡ ಕಲಾಭಿಮಾನಿಗಳೇ ಕಾರಣವೆಂದು ಹೇಳುತ್ತಾರೆ. ಅವರನ್ನು ಪ್ರತಿದಿನದ ನಾಟಕದ ಕೊನೆಯಲ್ಲಿ ಕೈ ಮುಗಿದು ನೆನೆಯುತ್ತಾರೆ. ಇಂದು ಕರ್ನಾಟಕವೇ ನನ್ನ ಮನೆ, ಕಲಾಭಿಮಾನಿಗಳೇ ನನ್ನ ಕುಟುಂಬ ಎಂದು, ಅತ್ಯಂತ ನಮ್ರತೆಯಿಂದ ನೆನೆಯುತ್ತಾರೆ.

ಮಾಸ್ಟರ್ ಹಿರಣ್ಣಯ್ಯನವರು, ಎಂದೂ ಮಾಡದ, ಯಾರೂ ಮಾಡದ ಕ್ರಾಂತಿಯನ್ನು ಕನ್ನಡ ರಂಗಭೂಮಿಯಲ್ಲಿ ಮಾಡಿದವರು. ಸಮಾಜದಲ್ಲಿ ಕಂಡು ಕೇಳಿ, ಅನುಭವಿಸಿದ ವಸ್ತುವೇ ಅವರ ನಾಟಕದ ವಸ್ತುವಾಯಿತು. ರಂಗಭೂಮಿಯ ಮೇಲೆ ಅವರ ನಾಲಿಗೆ ಎಷ್ಟು ಹರಿತವೋ ಅಷ್ಟೇ ಹರಿತ ಅವರ ಹಾಸ್ಯ.

ಅವರು ಸಾರ್ವಜನಿಕ ಸಮಾರಂಭದಲ್ಲಿ ಭಾಗವಹಿಸಿದಾಗಲೂ, ಮಾತನಾಡುವಾಗಲೂ ಕಾಣಬಹುದು. ಸ್ನೇಹಿತರನ್ನು, ಎಂದೂ ಗುರುತಿಸಬಲ್ಲ, ಅವರನ್ನು ನೆನೆಯಬಲ್ಲ, ಸರಳ, ಸುಂದರ ವ್ಯಕ್ತಿ. ಹಿರಣ್ಣಯ್ಯ, ಮಾಸ್ಟರ್ ಆಗಿದ್ದರೂ ಕನ್ನಡ ರಂಗಭೂಮಿಗೆ ಮಾಸ್ತರ್ ಆದರು.

ಸಾಮಾಜಿಕ ನಾಟಕವಾಡಿ ಹಣ ಗಳಿಸಿ, ಅದರಿಂದ ಜೀವಿಸಬಲ್ಲೆನೆಂಬುದನ್ನು ಜನತೆಗೆ ತೋರಿಸಿ ಕೊಟ್ಟರು. ಅನೇಕ ವಿದ್ಯಾರ್ಥಿನಿಲಯಕ್ಕೆ ಸಹಾಯ ಧನವಾಗಿ ಪ್ರತಿವರ್ಷವೂ ದೇಣಿಗೆಯನ್ನು ಕೊಡುವ ಪದ್ಧತಿ ಮಾಮೂಲು. ಅದರಿಂದ, ಬಡ ವಿದ್ಯಾರ್ಥಿಗಳಿಂದ, ಜರತಾರಿಯ ರುಮಾಲು. ಹಿಂದಿನ ಬಡತನದ ಅನುಭವವನ್ನು ಆಗಾಗ ನೆನೆದುಕೊಂಡಾಗ, ಅಂದಿನ ಆ ವ್ಯಕ್ತಿ ನಾನು ಹೌದೆ? ಎನ್ನುವಷ್ಟು ಸಂದೇಹ. ನಾನಿರುವತನಕ ಎಂತಹ ಸಂದರ್ಭ ಬಂದರೂ ರಂಗಭೂಮಿಯ ಸೇವೆ ಸದಾ ಮಾಡುವುದಾಗಿ ಅವರ [illegible] ಉತ್ತಮ ಹಾಸ್ಯ ನಾಟಕ, ನಟನಕಾರ.







## ಗ್ರಂಥಕರ್ತರನ್ನು ಕುರಿತು

ಸಾರ್ವಜನಿಕ ಕ್ಷೇತ್ರದಲ್ಲೂ, ಕನ್ನಡ ಸಾಹಿತ್ಯದಲ್ಲೂ ಶ್ರೀ ಟಿ. ಮಹಾಬಲೇಶ್ವರಭಟ್ಟರ ಹೆಸರು ದೊಡ್ಡದು. ಕಿರಿಯರೂ ಅಲ್ಲದ, ಹಿರಿಯರೂ ಅಲ್ಲದ ಹಸನಾದ ಐವತ್ತು ವರ್ಷದ ತುಂಬು ಜೀವನದಲ್ಲಿ, ಸ್ವಚ್ಛತೆಯನ್ನು ಪ್ರಾಮಾಣಿಕತನವನ್ನು, ನಂಬಿಕೆಯನ್ನು, ಜೀವನದ ಉದ್ದಕ್ಕೂ ಮಾನದಂಡವನ್ನಾಗಿಟ್ಟುಕೊಂಡು ಬಂದು ಪ್ರಾಮುಖ್ಯತೆಯನ್ನು ಪಡೆದವರೂ ಆಗಿದ್ದಾರೆ. ಗುಣದಲ್ಲೂ, ವೈವಿಧ್ಯದಲ್ಲೂ ಉತ್ತಮ ಎಂದು ಹೇಳಬಹುದಾದ ಸಣ್ಣ ಕತೆ, ಕಾವ್ಯ, ಕಾದಂಬರಿ, ಜೀವನ ಚರಿತ್ರೆ, ವಿಮರ್ಶೆ ಮುಂತಾದ ಹಲವು ಹತ್ತು ಪುಸ್ತಕಗಳನ್ನು ಬರೆದು ನಾಡಿಗೆ ಅರ್ಪಿಸಿದ್ದಾರೆ.

ಶ್ರೀ. ಟಿ. ಮಹಾಬಲೇಶ್ವರಭಟ್ಟರು ತಮ್ಮ ಬದುಕಿನ ಉದ್ದಕ್ಕೂ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸುತ್ತಾ ಬಂದವರು. ಅದರಲ್ಲಿ ಮೂಡಿಬರುವ ಸಾಹಿತ್ಯವಾಗಲಿ, ಹೊಮ್ಮಿಬರುವ ಭಾಷೆಯಾಗಲಿ ಸ್ವೈಜತೆಯಿಂದ ಕೂಡಿದ್ದಾಗಿದೆ. ಮನಸ್ಸಿಗೆ ಸಂತೋಷವನ್ನು ಕೊಡುವಂತಾದ್ದಾಗಿದೆ. ಈ ವರೆಗೆ ಹನ್ನೆರಡು ಕೃತಿಗಳನ್ನು ಕೊಟ್ಟು, ಸಾಹಿತ್ಯಾಸಕ್ತರಲ್ಲಿ ಕಾತುರವನ್ನು ಉಳಿಸಿಕೊಂಡು ಬಂದ ಶ್ರೀ ಭಟ್ಟರ ಈ ಹದಿಮೂರನೇ ಕೃತಿ ಈ "ಕನ್ನಡ ಕುಲದೀಪಕರು" ವಿಶಿಷ್ಟವಾದ ಬರವಣಿಗೆಯಾಗಿದೆ, ಸ್ವಯಂಪ್ರಭೆ ಉಳ್ಳದ್ದಾಗಿದೆ, ಖಚಿತವಾದ ಧೋರಣೆ, ಏರಿಳಿವು, ಸ್ಪಷ್ಟತೆ, ಇವರ ಸಾಹಿತ್ಯದ ಉದ್ದಕ್ಕೂ ಕಾಣಬಹುದು. ಇವರ ಶೈಲಿಯೂ ಕೂಡ ಅಷ್ಟೇ ಆಪ್ಯಾಯಮಾನ.

ಶ್ರೀ ಭಟ್ಟರು ತಮ್ಮ ಸಾಹಿತ್ಯದಲ್ಲಿ ಹೊಸ ಹೊಸ ಶಬ್ದಗಳನ್ನು, ಬಳಕೆಯ ನುಡಿಗಟ್ಟನ್ನು ಪ್ರಯೋಗಿಸಿದ್ದಾರೆ. ಓದುಗರ ಮನಸ್ಸನ್ನು ಸೆರೆಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ, ಅವರಲ್ಲಿ ಭಾಷೆಯಲ್ಲಿ ಶುದ್ಧತೆಯನ್ನೂ, ಸೂಚ್ಯಶಕ್ತಿಯನ್ನೂ ಕಾಣಬಹುದು.